KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೧, ೨೦೦೬ (ಭಾದ್ರಪದ ೩೦, ಶಕ ವರ್ಷ ೧೯೨೮) | ಸಂಚಿಕೆ ೩೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಶಿಕ್ಷಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಇಡಿ 211 ಯುಪಿಸಿ 2006, ಬೆಂಗಳೂರು, ದಿನಾಂಕ: 02ನೇ ಆಗಸ್ಟ್ 2006**

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಎನ್.ಇ.ಟಿ. / ಎಸ್.ಎಲ್.ಇ.ಟಿ. / ಪಿ.ಹೆಚ್.ಡಿ. / ಎಂ.ಫಿಲ್‌ಅನ್ನು ಪಾಸು ಮಾಡಿರುವ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಯು.ಜಿ.ಸಿ. ವೇತನ ಶ್ರೇಣಿ ರೂ.8000-275-13500 ನಲ್ಲಿನ ಉಪನ್ಯಾಸಕರ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

2. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-2ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಎನ್.ಇ.ಟಿ. / ಎಸ್.ಎಲ್.ಇ.ಟಿ. / ಪಿ.ಹೆಚ್.ಡಿ. / ಎಂ.ಫಿಲ್‌ಅನ್ನು ಇನ್ನೂ ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000-11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ: 12-02-2007ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಇವರು

ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಇವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ದಿನಾಂಕ: 12–02–2007ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003ರ ನಿಯಮ 6ರನ್ವಯ ಸೇವೆಯಿಂದ ತೆಗೆದುಹಾಕಲಾಗುವುದು.

(iv) ಎನ್.ಇ.ಟಿ. / ಎಸ್.ಎಲ್.ಇ.ಟಿ. ಯನ್ನು ನಿಗಧಿತ ಅವಧಿಯೊಳಗೆ ಪಾಸುಮಾಡದಿದ್ದಲ್ಲಿ ಅವರುಗಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂದು ಅವರ ಗಮನಕ್ಕೆ ಬಂದಿದೆಯೆಂದು ರೂ.20ರ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಕಾಲೇಜು ಶಿಕ್ಷಣ ಆಯುಕ್ತರು ಸಂಬಂಧಿಸಿದ ಅಭ್ಯರ್ಥಿಗಳಿಂದ ಪಡೆದುಕೊಳ್ಳತಕ್ಕದ್ದು.

(v) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

3. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ–4ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಎನ್.ಇ.ಟಿ. / ಎಸ್.ಎಲ್.ಇ.ಟಿ. / ಪಿ.ಹೆಚ್.ಡಿ. / ಎಂ.ಫಿಲ್‌ಅನ್ನು ಇನ್ನೂ ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರಿಗೆ ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ ಹಾಗೂ ಮಂಜೂರಾದ ಖಾಲಿ ಹುದ್ದೆ ಇಲ್ಲದಿರುವ ಪ್ರಯುಕ್ತ ಅವರು ಇತರೆ ಆಡಳಿತ ಮಂಡಳಿಗಳಿಂದ ಸೇವಾ ವಿಲೀನತೆಗೆ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿರುವುದರಿಂದ, ಇವರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ನಿರಾಕ್ಷೇಪಣಾ ಪತ್ರ ನೀಡಿದ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000–11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ: 12–02–2007ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಇವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಇವರು ಎನ್.ಇ.ಟಿ. / ಎಸ್.ಎಲ್.ಇ.ಟಿ.ಯನ್ನು ದಿನಾಂಕ: 12–02–2007ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ)(ವಿಶೇಷ) ನಿಯಮಗಳು 2003ರ ನಿಯಮ 6ರನ್ವಯ ಸೇವೆಯಿಂದ ತೆಗೆದುಹಾಕಲಾಗುವುದು.

(iv) ಎನ್.ಇ.ಟಿ. / ಎಸ್.ಎಲ್.ಇ.ಟಿ. ನಿಗಧಿತ ಅವಧಿಯೊಳಗೆ ತೇರ್ಗಡೆಯಾಗದಿದ್ದಲ್ಲಿ ಅವರುಗಳನ್ನು ಸೇವೆಯಿಂದ ತೆಗೆದು ಹಾಕಲಾಗುವುದೆಂದು ಅವರ ಗಮನಕ್ಕೆ ಬಂದಿದೆಯೆಂದು ರೂ.20ರ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ಕಾಲೇಜು ಶಿಕ್ಷಣ ಆಯುಕ್ತರು ಸಂಬಂಧಿಸಿದ ಅಭ್ಯರ್ಥಿಗಳಿಂದ ಪಡೆದುಕೊಳ್ಳತಕ್ಕದ್ದು.

(v) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

4. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ–3ರಲ್ಲಿ ಕಾಣಿಸಿರುವ ಖಾಸಗಿ ಅನುಧಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುಧಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ

ಸೇವಾ ವಿಲೀನತೆ (ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸಂಬಂಧಿಸಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000–11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

5. ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ–5ರಲ್ಲಿ ಕಾಣಿಸಿರುವ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಖಾಸಗಿ ಅನುಧಾನಿತ ಪದವಿ ಪೂರ್ವ ಕಾಲೇಜುಗಳು ಖಾಸಗಿ ಅನುಧಾನಿತ ಪದವಿ ಕಾಲೇಜುಗಳಿಂದ ಇನ್ನು ಪೂರ್ಣವಾಗಿ ಬೇರ್ಪಡಿಸಲ್ಪಟ್ಟಿಲ್ಲವಾದ್ದರಿಂದ ಮತ್ತು ಈ ಅರೆಕಾಲಿಕ ಉಪನ್ಯಾಸಕರಿಗೆ ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ / ಮಂಜೂರಾದ ಖಾಲಿ ಹುದ್ದೆ ಇಲ್ಲದಿರುವ ಪ್ರಯುಕ್ತ ಅವರು ಇತರೆ ಆಡಳಿತ ಮಂಡಳಿಗಳಿಂದ ಸೇವಾ ವಿಲೀನತೆಗೆ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿರುವುದರಿಂದ, ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ) (ವಿಶೇಷ) ನಿಯಮಗಳು 2003 ಮತ್ತು ಇದಕ್ಕೆ ಮುಂದುವರೆದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ನಿರಾಕ್ಷೇಪಣಾ ಪತ್ರ ನೀಡಿದ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ರೂ.6000–11200 ನಲ್ಲಿನ ಉಪನ್ಯಾಸಕರ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

(i) ಇವರುಗಳ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ / ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

(ii) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

(iii) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ / ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

3. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

4. ಈ ಅರೆಕಾಲಿಕ ಉಪನ್ಯಾಸಕರುಗಳು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಆಯಾಯ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯುಪಿಸಿ 2006 ದಿನಾಂಕ: 02–08–2006ರ ಅನುಬಂಧ–1**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿದ್ದು, ಯು.ಜಿ.ಸಿ. ವೇತನ **ಶ್ರೇಣಿ ರೂ.8000–13500ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

| ಕ್ರ ಸಂ | ಕಾಲೇಜು / ಆಡಳಿತ ಮಂಡಳಿ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿ ಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ | ಆಶಾಲತಾ ಎಂ. | ವಾಣಿಜ್ಯಶಾಸ್ತ್ರ | 1–6–67 | ಸಾಮಾನ್ಯ |

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯುಪಿಸಿ 2006 ದಿನಾಂಕ: 02-08-2006ರ ಅನುಬಂಧ-2**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿದ್ದು, **ರಾಜ್ಯ ವೇತನ ಶ್ರೇಣಿ ರೂ.6000-11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

**ಮೈಸೂರು ವಿಭಾಗ**

| ಕ್ರ ಸಂ | ಕಾಲೇಜು / ಆಡಳಿತ ಮಂಡಳಿ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|
| 1 | 2 | 4 | 5 | 6 | 7 |
| 1. | ಜೆ.ಎಸ್.ಎಸ್.ಪದವಿ ಕಾಲೇಜು, ಊಟಿ ರಸ್ತೆ, ಮೈಸೂರು | ಮಹದೇವ ಪ್ರಸಾದ್ ಎ.ಎನ್. | ಭೂಗೋಳಶಾಸ್ತ್ರ | 03–10–63 | 2ಎ |
| **ಧಾರವಾಡ ವಿಭಾಗ** | | | | | |
| 1. | ಎಸ್.ಎಸ್.ಟಿ.ಪಿ. ಕಾಲೇಜು, ಸಂಕೇಶ್ವರ, ಬೆಳಗಾಂ | ಪ್ರೇಮಾಗಾಡವಿ | ಹಿಂದಿ | 01–06–68 | ಸಾಮಾನ್ಯ |
| 2. | ಎಸ್.ಡಿ.ಎಂ. ಕಾಲೇಜು, ಹೊನ್ನಾವರ | ಡಾ: ಜಿ.ಎನ್.ಭಟ್ಟ | ಭೂಗೋಳಶಾಸ್ತ್ರ | 28–04–67 | ಸಾಮಾನ್ಯ |
| **ಗುಲ್ಬರ್ಗಾ ವಿಭಾಗ** | | | | | |
| 1. | ಶರಣಬಸವೇಶ್ವರ ಕಾಲೇಜು, ಗುಲ್ಬರ್ಗಾ | ಬಸವರಾಜ ಎ. ಬೀಳಗಿ | ರಸಾಯನಶಾಸ್ತ್ರ | 22–07–65 | 3ಬಿ |
| 2. | ಬಿ.ಸಿ.ಬಿ. ಕಲಾ ಮತ್ತು ವಾಣಿಜ್ಯ ಕಾಲೇಜು, ಲಿಂಗಸೂರು | ಚಂದ್ರಶೇಖರರೆಡ್ಡಿ ಬಿ. | ಸಮಾಜಶಾಸ್ತ್ರ | 01–06–68 | ಸಾಮಾನ್ಯ |

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯುಪಿಸಿ 2006 ದಿನಾಂಕ: 02-08-2006ರ ಅನುಬಂಧ-4**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಅದೇ ಕಾಲೇಜಿನಲ್ಲಿ ಕಾರ್ಯಭಾರವಿಲ್ಲದ ಪ್ರಯುಕ್ತ **ಬೇರೊಂದು ಪದವಿ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ.6000-11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

**ಮೈಸೂರು ವಿಭಾಗ:**

| ಕ್ರ ಸಂ | ಕಾಲೇಜು / ಆಡಳಿತ ಮಂಡಳಿ ಹೆಸರು | ಬೇರೆ ಆಡಳಿತ ಮಂಡಳಿಗಳಿಂದ/ ಕಾಲೇಜುಗಳಿಂದ ನಿರಾಕ್ಷೇಪಣಾ ಪತ್ರ ತಂದಿರುವ ಕಾಲೇಜಿನ ಹೆಸರು | ಅಭ್ಯರ್ಥಿಯ ಹೆಸರು ಶ್ರೀ / ಶ್ರೀಮತಿ | ಬೋಧಿಸುತ್ತಿರುವ ವಿಷಯ | ಜನ್ಮ ದಿನಾಂಕ | ಮೀಸಲಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ವಿ.ಎನ್.ವಿ. ಪ್ರಥಮ ದರ್ಜೆ ಕಾಲೇಜು, ಗೋರೂರು | ದಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ | ಸಂಪತ್ ಕುಮಾರ್ ಬಿ.ಇ. | ಇತಿಹಾಸ | 5–6–63 | ಸಾಮಾನ್ಯ |
| **ಗುಲ್ಬರ್ಗಾ ವಿಭಾಗ:** | | | | | | |
| 1. | ಥಿಯೋ ಸಾಫಿಕಲ್ ಮಹಿಳಾ ಕಾಲೇಜು, ಹೊಸಪೇಟೆ | ಶಿಕ್ಷಣ ಪ್ರಸಾರಕ ಸಮಿತಿ ಸಿದ್ದಾಪುರ | ಕಿಚಡಿ ಚನ್ನಪ್ಪ | ರಾಜ್ಯಶಾಸ್ತ್ರ | 1–6–71 | ಎಸ್.ಟಿ. |
| **ಬೆಂಗಳೂರು ವಿಭಾಗ** | | | | | | |
| 1. | ಕಲ್ಪತರು ವಿಜ್ಞಾನ ಕಾಲೇಜು, ತಿಪಟೂರು | ದಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್ | ಕೆ.ಎಂ. ವಿಜಯ ಕುಮಾರ್ | ಪ್ರಾಣಿಶಾಸ್ತ್ರ | 1–6–69 | ಜಿ.ಎಂ. |

| ಧಾರವಾಡ ವಿಭಾಗ | | | | | | |
|---|---|---|---|---|---|---|
| 1. | ಎಸ್.ಡಿ.ಎಂ. ಕಾಲೇಜು, ಹೊನ್ನಾವರ | ದಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್ | ಮಂಜುನಾಥ ಭಟ್ಟ | ಸಂಸ್ಕೃತ | 22–5–66 | ಜಿ.ಎಂ. |
| 2. | ಬಿ.ಸಿ.ಕಾಲೇಜು, ಅಂಕೋಲಾ | ಮಾರ್ಡನ್ ಎಜುಕೇಷನ್ ಸೊಸೈಟಿ, ಸಿರಸಿ | ನಾರಾಯಣ ಮೂರ್ತಿ ಎನ್. ವರ್ಣೇಕರ್ | ಇತಿಹಾಸ | 15–7–59 | ಜಿ.ಎಂ. |

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯುಪಿಸಿ 2006 ದಿನಾಂಕ: 02–08–2006ರ ಅನುಬಂಧ–3**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ಕಾಲೇಜಿನಲ್ಲಿ ಅಗತ್ಯ ಕಾರ್ಯಭಾರ ಹಾಗೂ ಮಂಜೂರಾದ ಖಾಲಿ ಹುದ್ದೆ ಇದ್ದು, ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಳಿಸಬಹುದಾದ **ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ.6000–11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

**ಮೈಸೂರು ವಿಭಾಗ**

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು | ವಿಷಯ | ಜನ್ಮ ದಿನಾಂಕ | ಕಾಲೇಜಿನ ಹೆಸರು |
|---|---|---|---|---|
| 1. | ಬಸವರಾಜು ಎಸ್. | ಭೂಗೋಳಶಾಸ್ತ್ರ | 24–5–66 | ಜೆ.ಎಸ್.ಎಸ್.ಕಾಲೇಜು, ಚಾಮರಾಜನಗರ |
| 2. | ಸುಜಾತಕುಮಾರಿ ಆರ್. | ಇತಿಹಾಸ | 18–8–63 | ಜೆ.ಎಸ್.ಎಸ್.ಪದವಿ ಕಾಲೇಜು, ನಂಜನಗೂಡು |
| 3 | ನಟರಾಜನ್ ಹೆಚ್.ಜಿ. | ಇತಿಹಾಸ | 12–3–67 | ಜೆ.ಎಸ್.ಎಸ್.ಪದವಿ ಕಾಲೇಜು, ಚಾಮರಾಜನಗರ ಮತ್ತು ನಂಜನಗೂಡು |
| 4. | ಸಂಪತ್ತು | ಇತಿಹಾಸ | 28–2–66 | ಜೆ.ಎಸ್.ಎಸ್.ಪದವಿ ಕಾಲೇಜು, ಗುಂಡ್ಲುಪೇಟೆ |
| **ಮಂಗಳೂರು ವಿಭಾಗ** | | | | |
| 1. | ಸುರೇಂದ್ರನಾಥಶೆಟ್ಟಿ | ರಾಜ್ಯಶಾಸ್ತ್ರ | 12–12–59 | ಎಂ.ಜಿ.ಎಂ.ಕಾಲೇಜು, ಉಡುಪಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ್ |
| 2. | ಕೆ.ಎಸ್.ಲಕ್ಷ್ಮೀನಾರಾಯಣ | ಗಣಿತಶಾಸ್ತ್ರ | 19–5–69 | ಜೆ.ಸಿ.ಬಿ.ಎಂ.ಕಾಲೇಜು, ಶೃಂಗೇರಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಮಣಿಪಾಲ್ |
| **ಧಾರವಾಡ ವಿಭಾಗ** | | | | |
| 1. | ಮಲ್ಲಪ್ಪ ವೀರಣ್ಣ ಜಗಬಡ್ಡಿ | ವಾಣಿಜ್ಯಶಾಸ್ತ್ರ | 1–8–65 | ಎಸ್.ಆರ್.ಕಂಠಿ ಕಾಲೇಜು, ಮುಧೋಳ |

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯುಪಿಸಿ 2006 ದಿನಾಂಕ: 02–08–2006ರ ಅನುಬಂಧ–5**

ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ 1993–94 ಹಾಗೂ 1994–95ನೇ ಸಾಲಿನಲ್ಲಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ಇತರೆ ಆಡಳಿತ ಮಂಡಳಿಗಳಿಂದ ನಿರಾಕ್ಷೇಪಣಾ ಪತ್ರ ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಾತಿಗೊಳಿಸಬಹುದಾದ **ಅಭ್ಯರ್ಥಿಗಳನ್ನು ರಾಜ್ಯ ವೇತನ ಶ್ರೇಣಿ ರೂ.6000–11200ರಲ್ಲಿ** ಸೇವಾ ವಿಲೀನತೆಗೊಳಿಸಿರುವ ಅರ್ಹ ಅಭ್ಯರ್ಥಿಗಳ ಪಟ್ಟಿ

ಮೈಸೂರು ವಿಭಾಗ:

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು | ವಿಷಯ | ಜನ್ಮ ದಿನಾಂಕ | ಕಾಲೇಜಿನ ಹೆಸರು | ನಿರಾಕ್ಷೇಪಣೆ ಪಡೆದುಕೊಂಡಿರುವ ಕಾಲೇಜು |
|---|---|---|---|---|---|
| 1. | ಬಿ.ಎಂ. ಶ್ರೀನಿವಾಸ್ | ರಸಾಯನಶಾಸ್ತ್ರ | 2–7–65 | ಭಾರತಿ ಕಾಲೇಜು, ಕೆ.ಎಂ.ದೊಡ್ಡಿ | ದಿ ರೂರಲ್ ಎಜುಕೇಷನ್ ಸೊಸೈಟಿ ಕನಕಪುರ, ಬೆಂಗಳೂರು ಗ್ರಾಮಾಂತರ |
| **ಗುಲ್ಬರ್ಗಾ ವಿಭಾಗ** | | | | | |
| 1. | ರಾಮರೆಡ್ಡಿ | ಕನ್ನಡ | 6–4–69 | ಎಸ್.ಎಸ್.ಆರ್.ಟಿ. ಮಹಿಳಾ ಕಾಲೇಜು, ರಾಯಚೂರು | ಕೆ.ಎಲ್.ಇ. ಸಂಸ್ಥೆ, ಬೆಳಗಾಂ |
| **ಮಂಗಳೂರು ವಿಭಾಗ** | | | | | |
| 1. | ವರಪ್ರಸಾದ್ ಬಿ.ಬಿ. | ಕನ್ನಡ | 22–8–69 | ಕಾವೇರಿ ಕಾಲೇಜು, ವೀರಾಜಪೇಟೆ | ಜೆ.ಎಸ್.ಎಸ್. ಆಡಳಿತ ಮಂಡಳಿ, ಚಾಮರಾಜನಗರ |
| **ಬೆಂಗಳೂರು ವಿಭಾಗ** | | | | | |
| 1. | ಬೊಮ್ಮೇಗೌಡ | ಕನ್ನಡ | 1–6–69 | ವಿ.ವಿ.ಪುರಂ ಸಂಜೆ ಕಾಲೇಜು, ಬೆಂಗಳೂರು | ಗೋಲ್ಡನ್ ವ್ಯಾಲಿ ಎಜುಕೇಷನ್ ಸೊಸೈಟಿ |
| 2. | ಮಂಜುನಾಥ ಎಸ್. | ಆಂಗ್ಲಭಾಷೆ | 5–5–68 | ಶ್ರೀ ಕುವೆಂಪು ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣ | ಕೆ.ಎಲ್.ಇ. ವಿದ್ಯಾಸಂಸ್ಥೆ, ಬೆಳಗಾಂ |
| **ಧಾರವಾಡ ವಿಭಾಗ** | | | | | |
| 1. | ರಾಜೇಶ್ ಆರ್. ನಾಯ್ಕ್ | ಸಸ್ಯಶಾಸ್ತ್ರ | 26–11–67 | ಎಸ್.ಡಿ.ಎಂ. ಕಾಲೇಜು, ಹೊನ್ನಾವರ | ಕೆ.ಎಲ್.ಇ. ವಿದ್ಯಾ ಸಂಸ್ಥೆ, ಬೆಳಗಾಂ |
| 2. | ಸುರೇಶ್ ಬಂಗೆಣ್ಣನವರ್ | ಕನ್ನಡ | 12–5–63 | ಮರಾಠ ಮಂಡಳ ಕಲಾ ಮತ್ತು ವಾಣಿಜ್ಯ ಕಾಲೇಜು, ಬೆಳಗಾಂ | ದಕ್ಷಿಣ ಕೊಂಕಣ ಶಿಕ್ಷಣ ಸಂಸ್ಥೆ, ತಿಲಕವಾಡಿ, ಬೆಳಗಾಂ |
| 3. | ರಾಜೇಂದ್ರಪ್ಪ ಸಿ.ತಡಗಣಿ | ಸಸ್ಯಶಾಸ್ತ್ರ | 22–7–67 | ಆರ್.ಟಿ.ಇ.ಎಸ್. ಕಾಲೇಜು, ರಾಣೆಬೆನ್ನೂರು | ವಿದ್ಯಾಪ್ರಸಾರಕ ಸಮಿತಿ ರಾಮದುರ್ಗ |
| 4. | ರಮೇಶ್ ಕಟಾಂಬಳೆ | ರಸಾಯನ ಶಾಸ್ತ್ರ | 18–7–69 | ದಕ್ಷಿಣ ಮಹಾರಾಷ್ಟ್ರ ಶಿಕ್ಷಣ ಸಂಸ್ಥೆಯ ಬಾಬುರಾವ್ ಕಾಕತ್ಕರ್ ಕಾಲೇಜು, ಬೆಳಗಾಂ | ದಕ್ಷಿಣ ಕೊಂಕಣ ಶಿಕ್ಷಣ ಸಂಸ್ಥೆ, ಬೆಳಗಾಂ |

**ಸಿ. ಬಸವರಾಜು**

ಪಿ.ಆರ್. 1216 ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ

**ತಹಶೀಲ್ದಾರರು, ಸುಳ್ಯ ತಾಲೂಕು, ದ.ಕ.**

**ಅಧಿಸೂಚನೆ**

## ನಂ. ಮಾ.ಹ.ಅ.ನಿಯಮ:1:2005–06, ದಿನಾಂಕ: 07ನೇ ಅಕ್ಟೋಬರ್ 2005

**ವಿಷಯ:** ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕರಣ ಕಲಂ 4(1) (ಬಿ) ಅನುಸಾರ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಕಛೇರಿಯ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಭಾರತ ಸರಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆಕ್ಟ್ 22 ಆಫ್ 2005) ಸೆಕ್ಷನ್ 5(1), 5(2) ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರರ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರಿರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಅನುಕ್ರಮವಾಗಿ "ಸಾರ್ವಜನಿಕ ಅಧಿಕಾರಿ" ಮತ್ತು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ

"ಮೇಲ್ಮನವಿ ಪ್ರಾಧಿಕಾರಿಯನ್ನಾಗಿ" ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಲಾಗಿದೆ (ಸರಕಾರದ ಅಧಿಸೂಚನೆ ನಂ. ಕಂ.ಇ. 37: ವಿಮಕ: 2005 ದಿ: 12–8–2005).

**I. 4. ಬಿ (I) ಅ: ಇಲಾಖೆಯ ವಿವರಗಳು ರಚನಾಸೂಚಿ ಕಾರ್ಯಗಳು ಹಾಗೂ ಕರ್ತವ್ಯಗಳು.**

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005 ಕಲಂ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ತಾಲೂಕು ಕಛೇರಿ ಸುಳ್ಯ. | ತಹಶೀಲ್ದಾರರು, ಸುಳ್ಯ | ಚುನಾವಣಾ ಶಿರಸ್ತೇದಾರರು, ತಾಲೂಕು ಕಛೇರಿ ಸುಳ್ಯ | ಸಹಾಯಕ ಕಮೀಷನರರು, ಪುತ್ತೂರು. |
| 2. | ನಾಡಕಛೇರಿ ಪಂಜ | ಉಪತಹಶೀಲ್ದಾರರು ಪಂಜ | ದ್ವಿ.ದ.ಸ. ನಾಡಕಛೇರಿ | ತಹಶೀಲ್ದಾರರು ಸುಳ್ಯ |
| 3. | ಕಂದಾಯ ನಿರೀಕ್ಷಕರ ಕಛೇರಿ ಸುಳ್ಯ | ಕಂದಾಯ ನಿರೀಕ್ಷಕರು ಸುಳ್ಯ | ಆಯಾ ಗ್ರಾಮದ ಗ್ರಾಮಕರಣಿಕರು, ಸುಳ್ಯ | ತಹಶೀಲ್ದಾರರು ಸುಳ್ಯ |
| 4. | ಕಂದಾಯ ನಿರೀಕ್ಷಕರ ಕಛೇರಿ, ಪಂಜ | ಕಂದಾಯ ನಿರೀಕ್ಷಕರು ಪಂಜ ಹೋಬಳಿ | ಆಯಾ ಗ್ರಾಮದ ಗ್ರಾಮಕರಣಿಕರು, ಪಂಜ ಹೋಬಳಿ | ತಹಶೀಲ್ದಾರರು ಸುಳ್ಯ |
| 5. | ಭೂಮಾಪಕರ ವಿಭಾಗ ಸುಳ್ಯ | ಪರ್ಯಾವೇಕ್ಷಕರು ಭೂಮಾಪನಾ ಶಾಖೆ, ಸುಳ್ಯ | ಆಯಾ ಗ್ರಾಮದ ಭೂಮಾಪಕರು | ತಹಶೀಲ್ದಾರರು ಸುಳ್ಯ |
| 6. | ಆಹಾರ ವಿಭಾಗ ಸುಳ್ಯ | ಆಹಾರ ಶಿರಸ್ತೇದಾರರು, ಸುಳ್ಯ | ಆಹಾರ ನಿರೀಕ್ಷಕರು ಸುಳ್ಯ | ತಹಶೀಲ್ದಾರರು ಸುಳ್ಯ |

**4 (ಬ) 1 (ಅ): ಸುಳ್ಯ ತಾಲೂಕಿನ ಸಾಮಾನ್ಯ ಮಾಹಿತಿಗಳು:**

**1. ಭೌಗೋಳಿಕ ವಿಸ್ತೀರ್ಣ : 83031**

**2. ಒಟ್ಟು ಜನಸಂಖ್ಯೆ : 140754 (2001ರ ಜನಗಣತಿ)**

1) ಗ್ರಾಮೀಣ ಜನಸಂಖ್ಯೆ : 122726
2) ನಗರ ಜನಸಂಖ್ಯೆ : 18028
3) ನಗರ ಪ್ರದೇಶ : 1
4) ಗಂಡಸರು : 70994
5) ಹೆಂಗಸರು : 69760
6) ಪ.ಜಾ. : 9825
7) ಪ.ಪಂ. : 9709
8) ಲಿಂಗಾನುಪಾತ : 983
9) ಜನಸಾಂದ್ರತೆ : 170 (2001ರ ಜನಗಣತಿ)

**3. ಶೈಕ್ಷಣಿಕ ಸಂಸ್ಥೆಗಳು:**

1) ವೈದ್ಯಕೀಯ ಕಾಲೇಜು : 1
2) ಎಂಜಿನಿಯರಿಂಗ್ ಕಾಲೇಜು : 1
3) ಡೆಂಟಲ್ ಕಾಲೇಜು : 1
4) ಆಯುರ್ವೇದಿಕ್ ಕಾಲೇಜು : 1
5) ಲಾ ಕಾಲೇಜು : 1
6) ಪದವಿಪೂರ್ವ ಕಾಲೇಜು : 8
7) ಪದವಿ ಕಾಲೇಜು : 6
8) ಹೈಸ್ಕೂಲ್ : 43
9) ಹಿ.ಪ್ರಾ. ಶಾಲೆ : 88
10) ಕಿ.ಪ್ರಾ. ಶಾಲೆ : 74
11) ಸಾಕ್ಷರತೆ ಪ್ರಮಾಣ : 87.4
12) ಹೆಂಗಸರ ಸಾಕ್ಷರತೆ : 74.9

4. 1) ಕೃಷಿಕರು : 726
2) ಕೃಷಿ ಕಾರ್ಮಿಕರು : 481

**5. ಮಳೆ ಪ್ರಮಾಣ**

| | |
|---|---|
| 1) ವಾಡಿಕೆ ಮಳೆ | : 4095–0 ಮೀ.ಮೀ. |
| 2) ವಾಸ್ತವಿಕ ಮಳೆ | : 3387–6 ಮೀ.ಮೀ. (2004 ರಲ್ಲಿ) |
| | : 3571–1 ಮೀ.ಮೀ. (2005 ರಲ್ಲಿ) |
| 3) ಮಳೆ ಮಾಪನಗಳು | : 7 |

**6. ಬ್ಯಾಂಕುಗಳು:**

| | |
|---|---|
| 1) ವಾಣಿಜ್ಯ ಬ್ಯಾಂಕು | : 19 |
| 2) ಗ್ರಾಮೀಣ ಬ್ಯಾಂಕು | : 2 |
| 3) ಇತರ ಬ್ಯಾಂಕು | : 4 |
| 4) ಸಹಕಾರಿ ಬ್ಯಾಂಕು | : 73 |
| 5) ಕ್ರೆಡಿಟ್ ಸಹಕಾರಿ ಸಂಘ | : 23 |

**7. ರಸ್ತೆಗಳು:**

| | |
|---|---|
| 1) ರಾಜ್ಯ ಹೆದ್ದಾರಿ | : 111–50 ಕಿ.ಮೀ. |
| 2) ಮುಖ್ಯ ಜಿಲ್ಲಾ ರಸ್ತೆ | : 90–40 ಕಿ.ಮೀ. |
| 3) ಇತರ ಬ್ಯಾಂಕು | : 4 |
| 4) ಸಹಕಾರಿ ಬ್ಯಾಂಕು | : 73 |
| 5) ಕ್ರೆಡಿಟ್ ಸಹಕಾರಿ ಸಂಘ | : 23 |
| 8. ಅಂಗನವಾಡಿ ಕೇಂದ್ರಗಳು | : 116 |
| 9. ವಿವಿಧ ವೇತನದಾರರು | |
| 1) ವೃದ್ಧಾಪ್ಯ ವೇತನ | : 219 |
| 2) ವಿಧವಾ ವೇತನ | : 934 |
| 3) ಅಂಗವಿಕಲ ವೇತನ | : 525 |
| 10. ನಾಡ ಕಛೇರಿ | : 1 |
| 11. ಹೋಬಳಿ | : 1 |
| 12. ಕಂದಾಯ ಗ್ರಾಮಗಳು | : 41 |
| 13. ಗ್ರಾಮ ಪಂಚಾಯತ್‌ಗಳು | : 27 |

**4 ಬಿ (1) ಇ: ಕಾರ್ಯವಿಧಾನ:**

1. ತಹಶೀಲ್ದಾರರು ಸುಳ್ಯ ತಾಲೂಕಿನ ಕಂದಾಯ ಆಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು ಕಂದಾಯ ಆಡಳಿತ ಹಾಗೂ ಕಾನೂನು ಸುವ್ಯವಸ್ಥೆಯ ಸಂಪೂರ್ಣ ಅಧಿಕಾರ ಹೊಂದಿದವರಾಗಿರುತ್ತಾರೆ. ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 11 ರಂತೆ ತಾಲೂಕಿಗೆ ಒಬ್ಬರಂತೆ ತಹಶೀಲ್ದಾರರನ್ನಾಗಿ ನೇಮಕ ಮಾಡಲಾಗಿದೆ. ಕರ್ನಾಟಕ ಭೂಕಂದಾಯ ಕಾಯಿದೆ ಮತ್ತು ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳಲ್ಲಿ ನಿಯಮಿಸಿದ ಎಲ್ಲಾ ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ತಹಶೀಲ್ದಾರರು ತಾಲೂಕಿನ ದಂಡಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**4 (ಬಿ) I, II**

**ಕಂದಾಯ ಇಲಾಖೆಯು ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತಿದೆ.**

ಅ. 1. ಕಾರ್ಯಕಾರಿ ದಂಡಾಧಿಕಾರಿಯ ಕಾರ್ಯನಿರ್ವಹಣೆ.

2. ಸಾರ್ವಜನಿಕ ದೂರು ನಿರ್ವಹಣೆ.

3. ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಸಾರ್ವಜನಿಕ ವಿತರಣಾ ವ್ಯವಸ್ಥೆಯ ನಿರ್ವಹಣೆ.

4. ಎಲ್ಲಾ ರೀತಿಯ ಚುನಾವಣೆಗಳನ್ನು ನಡೆಸುವುದು.

5. ಎಲ್ಲಾ ರೀತಿಯ ಗಣತಿ ಕಾರ್ಯಗಳನ್ನು ನಡೆಸುವುದು. (ಜನಗಣತಿ, ಜಾನುವಾರು ಗಣತಿ, ಕೃಷಿ ಗಣತಿ, ಆರ್ಥಿಕ ಗಣತಿ)

6. ಜಿಲ್ಲಾಧಿಕಾರಿಗಳ ಪರವಾಗಿ ಶಿಷ್ಟಾಚಾರ ಕಾರ್ಯ ನಿರ್ವಹಣೆ.

7. ಪ್ರಕೃತಿ ವಿಕೋಪ, ನೈಸರ್ಗಿಕ ಮತ್ತು ಮಾನವ ನಿರ್ಮಿತ ವಿಕೋಪಗಳಿಂದ ಭಾದಿತರಾದವರಿಗೆ ಪರಿಹಾರ, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯ ನಿರ್ವಹಣೆ.

8. ವೃದ್ಧಾಪ್ಯ ವೇತನ, ಅಂಗವಿಕಲ ವೇತನ, ವಿಧವಾ ವೇತನ, ಮೊದಲಾದ ಸಾಮಾಜಿಕ ಸುರಕ್ಷತೆಯ ಕ್ರಮಗಳ ನಿರ್ವಹಣೆ.

9. ಆಯುಧ ಕಾಯಿದೆಯಡಿ ಪ್ರಕರಣ ವಿಲೇವಾರಿ.

10. ಆದಾಯ, ಜಾತಿ ವಾಸ್ತವ್ಯದ ಬಗ್ಗೆ ದೃಢಪತ್ರ ನೀಡುವುದು.

11. ನ್ಯಾಯಾಲಯದಲ್ಲಿ ಸರ್ಕಾರಿ ವ್ಯಾಜ್ಯ ನಿರ್ವಹಣೆ.
12. ಸರಕಾರದಿಂದ ಕಾಲಕಾಲಕ್ಕೆ ಜ್ಯಾರಿಕೆ ಬರುವ ವಿವಿಧ ಯೋಜನೆಗಳ ಮತ್ತು ಕಾರ್ಯಕ್ರಮಗಳ ನಿರ್ವಹಣೆ.

**ಆ. ಕಂದಾಯ ಆಡಳಿತ**

1. ರಾಜ್ಯದಲ್ಲಿನ ಭೂದಾಖಲೆಗಳ ನಿರ್ವಹಣೆ ಎಲ್ಲಾ ಜಮೀನುಗಳ ಭೂಮಾಪನ.
2. ಭೂಕಂದಾಯ ನೀರು ತೆರಿಗೆ, ಸರ್ಕಾರಿ ಬಾಕಿ ವಸೂಲಾತಿ.
3. ಗೋಮಾಳ, ಕೆರೆ ಅಂಗಳ, ಉಪವನಗಳು, ಇತ್ಯಾದಿ ಸಾಮುದಾಯಿಕ ಜಮೀನುಗಳನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ಕಾದಿರಿಸಿದ ಜಮೀನುಗಳ ನಿರ್ವಹಣೆ ಮತ್ತು ಪರಿಸರ ಸಂರಕ್ಷಣೆ.
4. ಅಕ್ರಮ ಸಕ್ರಮ ಸಮಿತಿಗೆ ಪೂರಕ ಮಾಹಿತಿ ಹಾಗೂ ದಾಖಲಾತಿ ನಿರ್ವಹಣೆ.
5. ಭೂಸುಧಾರಣೆ ಮತ್ತು ಗಣಿಗಾರಿಕೆ ನಿಬಂಧನೆಗಳ ನಿರ್ವಹಣೆ.
6. ಭೂ ಪರಿವರ್ತನೆ.
7. ಜಾತಿ, ಆದಾಯ, ವಾಸ್ತವ್ಯ ದೃಢಪತ್ರ ವಿಲೇವಾರಿ.
8. ವೃದ್ಧಾಪ್ಯ ವೇತನ, ಅಂಗವಿಕಲ ವೇತನ, ವಿಧವಾ ವೇತನ, ಮೊದಲಾದ ಸಾರ್ವಜನಿಕ ಸುರಕ್ಷತಾ ಕಾರ್ಯಗಳ ಮಂಜೂರಾತಿ.
9. ಕರ್ನಾಟಕ ಭೂಕಂದಾಯ ಕಾಯ್ದೆಯಡಿಯಲ್ಲಿ ಬರುವ ಎಲ್ಲಾ ವ್ಯವಹಾರಗಳ ನಿರ್ವಹಣೆ.

**ಇ. ಕಾನೂನು ಆಡಳಿತ**

**ತಹಶೀಲ್ದಾರರು ಹೊಂದಿರುವ ಅಧಿಕಾರದ ಮುಖ್ಯ ಕಾಯ್ದೆಗಳ ಮತ್ತು ಕಾನೂನುಗಳ ವಿವರ**

1. ಕರ್ನಾಟಕ ಭೂಸುಧಾರಣಾ ಕಾಯ್ದೆ ಅಧಿನಿಯಮ 1961 ಮತ್ತು ನಿಯಮಾವಳಿ 1974.
2. ಕರ್ನಾಟಕ ಹಲವು ಇನಾಂ ರದ್ದತಿ ಅಧಿನಿಯಮ 1977.
3. ಕರ್ನಾಟಕ ಗ್ರಾಮ ನೌಕರಿಗಳ ರದ್ದತಿ ಅಧಿನಿಯಮ 1961.
4. ಕರ್ನಾಟಕ ಪುರಸಭೆಗಳ ಅಧಿನಿಯಮ 1964.
5. ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆ ಮತ್ತು ಇತರೆ ಉಪಬಂಧಗಳ ಅಧಿನಿಯಮ 1974 ಮತ್ತು ನಿಯಮಾವಳಿ 1975.
6. ಕರ್ನಾಟಕ ವೃದ್ಧಾಪ್ಯ ವೇತನ ನಿಯಮಾವಳಿ.
7. ನಿರ್ಗತಿಕ ವಿಧವಾ ವೇತನ ನಿಯಮಾವಳಿ.
8. ದೈಹಿಕ ಅಂಗವಿಕಲರಿಗೆ ನಿರ್ವಹಣಾ ಭತ್ಯೆ ಮಂಜೂರಿ ನಿಯಮಾವಳಿ.
9. ಕರ್ನಾಟಕ ಋಣ ವಿಮೋಚನಾ ಅಧಿನಿಯಮ.
10. ಮತದಾರರ ನೋಂದಣಿ ನಿಯಮಾವಳಿ.
11. ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ 1966.
12. ಕರ್ನಾಟಕ ನೀರಾವರಿ ಅಧಿನಿಯಮ 1965.
13. ಕರ್ನಾಟಕ ನೀರಾವರಿ (ನೀರಿನ ಕರ ಆಕರಣಿ) ನಿಯಮಾವಳಿ 1965.
14. ಕರ್ನಾಟಕ ಅರಣ್ಯ ನಿಯಮಾವಳಿ 1969.
15. ಕರ್ನಾಟಕ ಜಾನುವಾರು ಅತಿಕ್ರಮ ಪ್ರವೇಶ ಅಧಿನಿಯಮ 1966.
16. ಏಲಕ್ಕಿ ಅಧಿನಿಯಮ 1965.
17. ಕರ್ನಾಟಕ ಸಾರ್ವಜನಿಕ ಆವರಣಗಳ ಅಧಿನಿಯಮ 1974 ಮತ್ತು ಅದರಡಿಯ ನಿರ್ವಹಣೆ.

**ದಂಡಾಧಿಕಾರಿಯಾಗಿ ತಹಶೀಲ್ದಾರರು ಈ ಕೆಳಗಿನ ಕಾಯ್ದೆಗಳಡಿಯಲ್ಲಿ ಅಧಿಕಾರ ಹಾಗೂ ಕರ್ತವ್ಯಗಳನ್ನು ಹೊಂದಿರುತ್ತಾರೆ.**

1. ದಂಡ ಪ್ರಕ್ರಿಯೆ ಸಂಹಿತೆ 1974.
2. ಭಾರತ ಸಾಕ್ಷ್ಯ ಅಧಿನಿಯಮ 1963.
3. ಕರ್ನಾಟಕ ಪೊಲೀಸ್ ಅಧಿನಿಯಮ 1963.
4. ಜೀತದಾಳು ಪದ್ಧತಿ (ನಿರ್ಮೂಲನೆ) ಅಧಿನಿಯಮ 1976.
5. ಪ್ರಮಾಣ ವಚನ ಅಧಿನಿಯಮ 1999.
6. ಭಾರತೀಯ ಮುದ್ರಾಂಕ ಅಧಿನಿಯಮ 1899.
7. ಪ್ರಾಣಿಗಳ ಹಿಂಸೆ ಅಧಿನಿಯಮ 1960.
8. ಕರ್ನಾಟಕ ಭಿಕ್ಷಾಟನಾ ಅಧಿನಿಯಮ 1975.
9. ಸಾರ್ವಜನಿಕ ಆರೋಗ್ಯ ಅಧಿನಿಯಮ – 1944.
10. ಕರ್ನಾಟಕ ಮಾರಾಟಕರ ಅಧಿನಿಯಮ 1957.
11. ಸತಿ ಹೋಗುವ (ನಿಷೇಧ) ಅಧಿನಿಯಮ 1987.

12. ಪ.ಜಾತಿ: ಪ.ವರ್ಗಗಳ (ದೌರ್ಜನ್ಯ ನಿಷೇಧ) ಅಧಿನಿಯಮ 1989.
13. ಕರ್ನಾಟಕ ಆಹಾರ ಮತ್ತು ನಾಗರಿಕ ಪೂರೈಕೆ ಅಧಿನಿಯಮ.
14. ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳ ಜೀರ್ಣೋದ್ಧಾರ.

## 4 ಬಿ (1) ರಲ್ಲಿ II

**ತಾಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಅಧಿಕಾರಿಗಳ ಮತ್ತು ಕರ್ತವ್ಯದ ವಿವರಗಳು**

ತಹಶೀಲ್ದಾರರು

| ಕೇಂದ್ರ ಸ್ಥಾನೀಯ ಶಿರಸ್ತೇದಾರರು | ಕಾರ್ಯಕಾರಿ ಶಿರಸ್ತೇದಾರ್ | ಚುನಾವಣಾ ಶಿರಸ್ತೇದಾರ್ | ಉಪತಹಶೀಲ್ದಾರ್ ನಾಡಕಛೇರಿ ಪಂಜ | ಭೂಮಾಪನಾ ಪರ್ಯಾವೇಕ್ಷಕರು | ಆಹಾರ ಶಿರಸ್ತೇದಾರ್ |
|---|---|---|---|---|---|

| ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. | ದ್ವಿ.ದ.ಸ. | ಬೆರಳಚ್ಚುಗಾರರು | ಪ್ರ.ದ.ಸ. ಭೂ ಮಾಪಕರು | ದ್ವಿ.ದ.ಸ. ಭೂ ಮಾಪಕರು | ಪ್ರ.ದ. ಸ. | ದ್ವಿ.ದ. ಸ. |
|---|---|---|---|---|---|---|---|---|---|
| 3 | 7 | 2 | 1 | 1 | 1 | 1 | 1 | 1 | 1 |

| ಜವಾನರು | ಅಟೆಂಡರ್ | ಜವಾನರು |
|---|---|---|
| 3 | 1 | 15 |

## III 4 ಬಿ (1) (111)

**ತಾಲೂಕು ಕಛೇರಿಯ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ:**

ತಾಲೂಕು ಕಛೇರಿಯಲ್ಲಿ ಅಧಿಕಾರಿಗಳು ಮತ್ತು ಸಿಬ್ಬಂದಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ನಂ. ಎ.ಡಿ.ಎಂ.ಸಿ.ಆರ್. 1:05–06 ದಿನಾಂಕ: 01–10–2005 ರಂತೆ ಅಧಿಕೃತ ಜ್ಞಾಪನಗಳಲ್ಲಿ ಕಾರ್ಯ ನಿರ್ವಹಣಾ ಆದೇಶ ಜಾರಿಗೊಳಿಸಿದೆ. ಅಂತೆಯೇ ಸಿಬ್ಬಂದಿ ವರ್ಗದವರು ಕಾರ್ಯನಿರ್ವಹಿಸುತ್ತಿದ್ದಾರೆ.

ಮೇಲೆ ತಿಳಿಸಿರುವ ಎಲ್ಲಾ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗ (ಗ್ರೂಪ್ ಸಿ ಮತ್ತು ಡಿ) ತಹಶೀಲ್ದಾರರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಈ ಕಛೇರಿಯಲ್ಲಿ ನಿರ್ವಹಿಸುವ ಎಲ್ಲಾ ಸಂಬಂಧಿಸಿದ ಶಾಖೆಗಳ ವಿಷಯಗಳಲ್ಲಿ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರಿ ತಹಶೀಲ್ದಾರರಾಗಿರುತ್ತಾರೆ.

### 1) ಕಾಗದ ಪತ್ರಗಳ ಸ್ವೀಕೃತಿ ವಿಲೇವಾರಿ

ಸಾರ್ವಜನಿಕರಿಂದ, ಅಧೀನ ಕಛೇರಿಗಳಿಂದ ಮತ್ತು ಸರ್ಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು : ಕಡತಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲೇ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿಯ ಉಪತಹಶೀಲ್ದಾರರ ಮುಖಾಂತರ ತಹಶೀಲ್ದಾರರ ಗಮನಕ್ಕೆ ತಂದು ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಪ್ರತಿ ಕಡತ: ಕಾಗದ ಪತ್ರಗಳನ್ನು ಶಾಖೆವಾರು ಗುರುತಿಸುವಂತೆ ಹಾಕಿದ ನಂತರ ಅಗತ್ಯ ಕ್ರಮ ಕೈಗೊಳ್ಳಲು ನೀಡಲಾಗುತ್ತದೆ. ಉದಾಹರಣೆಗೆ

1. ಭೂ ಮಂಜೂರಾತಿ (ಎಲ್.ಎನ್.ಡಿ)
2. ಭೂಸುಧಾರಣೆ (ಎಲ್.ಆರ್.ವೈ)
3. ಭೂಸ್ವಾಧೀನ (ಎಲ್.ಕ.ಕ್ಯೂ)
4. ಲೆಕ್ಕ ಶಾಖೆ (ಎ.ಸಿ.ಬಿ)
5. ಪ್ರಕೃತಿ ವಿಕೋಪ (ಸಿ.ಎ.ಎಲ್)

6. ಹಕ್ಕು ದಾಖಲೆ (ಆರ್.ಆರ್.ಟಿ)
7. ಸಿಬ್ಬಂದಿ ಶಾಖೆ (ಇ.ಎಸ್.ಟಿ)
8. ಅಭಿಲೇಖಾಲಯ (ಆರ್.ಕೆ)
9. ಭೂಪರಿವರ್ತನೆ (ಎ.ಎಲ್.ಎನ್)
10. ಚುನಾವಣೆ (ಇ.ಎಲ್.ಎನ್)
11. ಆಡಳಿತ (ಎ.ಡಿ.ಎಂ)
12. ಮೆಜಿಸ್ಟ್ರೀರಿಯಲ್ (ಎಂ.ಎ.ಜೆ)
13. ಕರ್ನಾಟಕ ಪರಿಶಿಷ್ಟ ಜಾತಿ (ವರ್ಗಗಳ ಪರಾಭಾರೆ ನಿಷೇಧ) (ಪಿ.ಟಿ.ಸಿ.ಎಲ್)
14. ನೀರಾವರಿ (ಐ.ಆರ್.ಆರ್)
15. ಅರಣ್ಯ (ಎಫ್.ಒ.ಆರ್)
16. ಸಾಲ್ವೆನ್ಸಿ (ಎಸ್.ಒ.ಎಲ್)
17. ಮಿಸಲೇನಿಯಸ್ (ಎಂ.ಎಸ್.ಸಿ)
18. ಸಾರ್ವಜನಿಕ ಕುಂದುಕೊರತೆ (ಸಿ.ಎಂ.ಪಿ)

## 4 ಬಿ (1) IV

**IV. ಕಛೇರಿ ಪ್ರಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು**

1. ತಹಶೀಲ್ದಾರರ ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ, ದಾಖಲಿಸಿ ವಿಷಯ ನಿರ್ವಾಹಕರಿಗೆ ನೀಡುವ ವ್ಯವಸ್ಥೆ ಕಲ್ಪಿಸಲಾಗಿದೆ.
2. ಸಾರ್ವಜನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದಲ್ಲದೆ ಕಾರ್ಯಗತ ಅವಧಿ ನಿಗದಿಪಡಿಸಿ ತಿಳಿಸಲಾಗುತ್ತಿದೆ.
3. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆ ಬಗ್ಗೆ ಸ್ವೀಕರಿಸಲಾಗುವ ಎಲ್ಲಾ ಮನವಿಗಳನ್ನು ಪ್ರತ್ಯೇಕ ರಿಜಿಸ್ಟರ್‌ನಲ್ಲಿ ನಮೂದಿಸಿ ಕ್ಲಿಪ್ತ ಕಾಲದಲ್ಲಿ ಉತ್ತರ ನೀಡುವುದು.

ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿ ಪಡಿಸುವುದು, ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಪ್ರತೀ ಮಾಹೆಯಲ್ಲೂ ಕಂದಾಯ ನಿರೀಕ್ಷಕರ ಮತ್ತು ಗ್ರಾಮಕರಣಿಕರ ಸಭೆ ಕರೆಯಲಾಗುವುದು.

ಕಛೇರಿ ಕೈಪಿಡಿ ನಿಯಮಾವಳಿ ರೀತ್ಯಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರು ಸ್ವೀಕರಿಸಿ ಗರಿಷ್ಟ 5 ದಿನಗಳೊಳಗಾಗಿ ವಿಷಯ ನಿರ್ವಾಹಕರು ಎಲ್ಲಾ ಸ್ವೀಕರಿಸುವ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರ ದಿನಚರಿಯಲ್ಲಿ ನಮೂದಿಸಿಕೊಂಡು ತದನಂತರ ವಿಷಯ ವಹಿಯಲ್ಲಿ ಅನುಕ್ರಮವಾಗಿ ದಾಖಲಿಸಿಕೊಂಡು ಕಡತಗಳಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರೆಲ್ಲರೂ ಕಛೇರಿ ಕಾರ್ಯ ವಿಧಾನ ರೀತ್ಯ ಐದು ಕಟ್ಟು (Five Bundle System) ವಿಧಾನ ಅಳವಡಿಸಿ ಕಾರ್ಯ ನಿರ್ವಹಿಸುತ್ತಾರೆ.

ವಿಷಯ ನಿರ್ವಾಹಕರಿಂದ ಬಂದಂತಹ ಎಲ್ಲಾ ಕಡತಗಳ ಪರಿಶೀಲನೆ ಮಾಡಿ ಶಾಖಾ ಮುಖ್ಯಸ್ಥರು ವಿಳಂಬವಾಗದ ರೀತಿ ಕಡತದಲ್ಲಿ ವಿಷಯವಾರು ತೀರ್ಮಾನ ಕೈಗೊಳ್ಳುವ ನಿಟ್ಟಿನಲ್ಲಿ ಸೂಕ್ತ ಅಭಿಪ್ರಾಯದೊಂದಿಗೆ ಸಲ್ಲಿಸುತ್ತಾರೆ.

ಕಡತಗಳಲ್ಲಿ ತೀರ್ಮಾನ ಕೈಗೊಳ್ಳುವ ಬಗ್ಗೆ ಅನುಸರಿಸುವ ಬಗ್ಗೆ ಕಾರ್ಯ ವಿಧಾನ ಕಛೇರಿ ಕೈಪಿಡಿಯ ನಿಯಮಾವಳಿ ರೀತ್ಯ ಕ್ರಮವಹಿಸಲಾಗುತ್ತದೆ.

## 4 ಬಿ (1) V

**ತಹಶೀಲ್ದಾರರ ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳು**

ತಹಶೀಲ್ದಾರರು ಮೇಲೆ ರೂಪಿಸಲಾದ ಕಾಯ್ದೆ ನಿಯಮಗಳಡಿ ನಿರ್ವಹಿಸುವ ಎಲ್ಲಾ ಕಡತಗಳಲ್ಲಿ ಅಂತಿಮ ನೀಡಿ ಮುಕ್ತಾಯವಾದ ನಂತರ ಪ್ರತೀ ಕಡತಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಪ್ರವರ್ಗ 'ಎ' 'ಬಿ' 'ಸಿ' 'ಡಿ' ಮತ್ತು 'ಇ' ಎಂದು ವರ್ಗೀಕರಿಸಿ ನಿರ್ವಹಿಸಲಾಗುತ್ತಿದೆ. ಪ್ರತೀ ವರ್ಗೀಕರಣ ಅವಧಿ ಕೆಳಕಂಡಂತಿರುತ್ತದೆ.

| | |
|---|---|
| 'ಎ' ಡಿಸ್ – | ಶಾಶ್ವತ |
| 'ಬಿ' ಡಿಸ್ – | 30 ವರ್ಷಗಳು |
| 'ಸಿ' ಡಿಸ್ – | 10 ವರ್ಷಗಳು |
| 'ಡಿ' ಡಿಸ್ – | 5 ವರ್ಷಗಳು |
| 'ಇ' ಡಿಸ್ – | 1 ವರ್ಷಗಳು |

## 4 ಬಿ (1) VI ಕಛೇರಿಯ ಕೆಲಸಕ್ಕಾಗಿ ಉಪಯೋಗಿಸಬೇಕಾದ ವಹಿಗಳು ಮತ್ತು ದಾಖಲೆಗಳು:

ಕಛೇರಿಯ ಕೆಲಸದ ಬಗ್ಗೆ ಈ ಕೆಳಗಿನ ವಹಿಗಳನ್ನು ಇಟ್ಟು ಕೆಲಸ ನಿರ್ವಹಿಸಲಾಗುತ್ತದೆ.

1) ಟಪ್ಪಾಲು ವಹಿ
2) ಅರೆ ಸರಕಾರಿ ಪತ್ರಗಳ ಬಗ್ಗೆ ವಹಿ
3) ಚುಕ್ಕೆ ಗುರುತಿನ ಪ್ರಶ್ನೆ ವಹಿ

4) ಹಾಜರಾತಿ ವಹಿ
5) ಚಲನ್ ವಹಿ
6) ಅಕ್ರಮ ಸಕ್ರಮ ಮಂಜೂರಾತಿ ವಹಿ
7) ಮನೆ ನಿವೇಶನ ಮಂಜೂರಾತಿ ವಹಿ
8) ಬಂದೂಕು ಪರವಾನಿಗೆ ವಹಿ
9) ವೃದ್ಧಾಪ್ಯ ವಿಧವಾ ಅಂಗವಿಕಲ ವೇತನ ವಹಿ
10) ಬಾಕಿ ಪಟ್ಟಿ ವಹಿ
11) ವಿಷಯ ನಿರ್ವಾಹಕರಲ್ಲಿರುವ ವಹಿಗಳು
    1) ದಿನವಹಿ
    2) ವಾರವಹಿ
    3) ತಿಂಗಳ ಪ್ರಗತಿ ವಹಿ
12) ವಿವಿಧ ಲೆಕ್ಕ ಶೀರ್ಷಿಕೆಗಳಲ್ಲಿ ಸಿಬ್ಬಂದಿ ವೇತನ ವಹಿ
13) ಪ್ರಾಕೃತಿಕ ವಿಕೋಪ ಪರಿಹಾರ ಮಂಜೂರಾತಿ ವಹಿ
14) ಆರಾಧನಾ, ತಸ್ತೀಕ ಮಂಜೂರಾತಿ ವಹಿ
15) ಭೂ ಪರಿವರ್ತನಾ ಹಿಂಬರಹ ವಹಿ
16) ಸೇವಾವಹಿಯ ಸಂಚಲನ ವಹಿ
17) ಭೂಸುಧಾರಣಾ ಮಂಜೂರಾತಿ ವಹಿ

## 4 ಬಿ (1) VII

**ಅದರ ಕಾರ್ಯ ನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು.**

1. ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗದಿ ಪಡಿಸುವುದು.
2. ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲನೆ ಬಗ್ಗೆ ಸಭೆಗಳನ್ನು ಏರ್ಪಡಿಸುವುದು.
3. ಸಾರ್ವಜನಿಕರ ಕುಂದುಕೊರತೆ ಆಲಿಸುವುದು
4. ಪಾರದರ್ಶಕ ಕಾಯಿದೆ ಅನುಷ್ಠಾನ

**5. ಎಲ್ಲಾ ವರ್ಗದ ಜನರಿಂದ ಸ್ವೀಕರಿಸುವಂತಹ ಅಹವಾಲುಗಳು**

ರೈತ ಸಂಘಟನೆಗಳು, ವಿದ್ಯಾರ್ಥಿಗಳು ಕುಂದುಕೊರತೆಗಳಲ್ಲದೆ ಇನ್ನಿತರ ಸಂಘಟನೆಗಳಿಂದ ನಡೆಸುವ ಪ್ರತಿಭಟನೆಗಳ ಅಹವಾಲುಗಳನ್ನು ಸ್ವೀಕರಿಸಿ ಸಂಬಂಧಿಸಿದವರಿಗೆ ರವಾನಿಸಿ ಮಾಹಿತಿ ಪಡೆದು ಪರಿಹಾರ ಒದಗಿಸುವುದಲ್ಲದೆ ಜಿಲ್ಲಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸಲಾಗುತ್ತಿದೆ. ಸಾರ್ವಜನಿಕ ದೂರು ಕೋಶ ಮುಖೇನ ಸ್ವೀಕರಿಸುವ ಅರ್ಜಿಗಳ ಪರಿಶೀಲನೆ ಹಾಗೂ ವಿಲೇವಾರಿ.

**6. ಪ್ರಾಕೃತಿಕ ವಿಕೋಪ:**

ನೈಸರ್ಗಿಕ ವಿಕೋಪಗಳಾದ ಅತಿವೃಷ್ಠಿ ಸೇರಿದಂತೆ ಎಲ್ಲಾ ವಿಕೋಪಗಳ ಬಗ್ಗೆ ನಿಯಮಾನುಸಾರ ಪರಿಹಾರ ನೀಡಲಾಗುತ್ತಿದೆ. ಅಲ್ಲದೆ ಸಾರ್ವಜನಿಕರಿಗೆ ಮನವರಿಕೆ ಅಗತ್ಯವಿದ್ದಲ್ಲಿ ಸಂಕಷ್ಟದ ಮಾಹಿತಿ ಪಡೆಯಲು ಹಾಗೂ ತುರ್ತು ಪರಿಹಾರ ನೀಡಲು ತಾಲೂಕು ಕಛೇರಿಯಲ್ಲಿ ಕಂಟ್ರೋಲ್ ರೂಮ್ ತೆರೆಯಲಾಗಿದೆ. ತಾಲೂಕು ಕಛೇರಿಯ ದೂರವಾಣಿ ಸಂಖ್ಯೆ – 230330 ಆಗಿರುತ್ತದೆ.

7. ಕರ್ನಾಟಕ ಭೂಕಂದಾಯ ಕಾಯಿದೆ ಕಲಂ 94ಸಿ ರಡಿ ಸ್ವೀಕರಿಸಿದ ಅರ್ಜಿಗಳ ವಿಲೇವಾರಿ

## 4 ಬಿ (1) VIII

**ಮಂಡಳಿ: ಪರಿಷತ್ತು: ಸಮಿತಿಗಳಲ್ಲಿ ಎರಡು ಹಾಗೂ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳಿಂದ ರಚಿಸಲಾದ ಸಮಿತಿಯ ಸಲಹೆ ಹಾಗೂ ಸರ್ಕಾರದ ನಡವಳಿಗಳು**

ಕಛೇರಿಯಲ್ಲಿ ಸರ್ಕಾರದ ಆದೇಶದಂತೆ ಅಕ್ರಮ ಸಕ್ರಮೀಕರಣ ಸಮಿತಿ, ಭೂನ್ಯಾಯ ಮಂಡಳಿಯ ಸಮಿತಿ, ಆರಾಧನಾ ಸಮಿತಿಗಳು ರಚನೆಯಾಗಿ ಕೆಲಸ ನಿರ್ವಹಿಸಲಾಗುತ್ತದೆ.

## 4 ಬಿ (1) IX/X

**ತಾಲೂಕು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಮಾಹಿತಿ ಪುಸ್ತಕ ಮತ್ತು ವೇತನ ವಿವರ.**

ತಹಶೀಲ್ದಾರರು ಕಛೇರಿಯ ಮುಖ್ಯಸ್ಥರಾಗಿದ್ದು ಕಛೇರಿಯ ಮುಖ್ಯಸ್ಥರಿಗೆ ಸರ್ಕಾರ ಇಲ್ಲವೇ ಇಲಾಖೆ ನೀಡಿದ ಹಕ್ಕು ಬಾಧ್ಯತೆಗಳಿಗನುಗುಣವಾಗಿ ಕರ್ತವ್ಯ ನಿರ್ವಹಣೆ

| ಕ್ರ. ಸಂ. | ಅಧಿಕಾರಿ: ನೌಕರರ ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ | ದೂರವಾಣಿ ಸಂಖ್ಯೆ |
|---|---|---|---|---|
| 1. | ತಹಶೀಲ್ದಾರರು | 1 | 6000–11200 | 230330 |
| 2. | ಉಪತಹಶೀಲ್ದಾರರು | 4 | 5200–9580 | 230330 |
| 3. | ಪರ್ಯಾವೇಕ್ಷಕರು (ಭೂಮಾಪನ) | 1 | 4575–8400 | 230330 |
| 4. | ಕಂದಾಯ ನಿರೀಕ್ಷಕರು | 2 | 3850–7050 | 230330 |
| 5. | ಪ್ರಥಮ ದರ್ಜೆ ಸಹಾಯಕರು | 7 | 3850–7050 | 230330 |
| 6. | ಆಪ್ತ ಸಹಾಯಕರ ಹುದ್ದೆ | 1 | 3000–5450 | 230330 |
| 7. | ದ್ವಿ..ದ.ಸ | 10 | 3000–5450 | 230330 |
| 8. | ದ್ವಿ..ದ. ಭೂಮಾಪಕರು | 15 | 3300–6300 | 230330 |
| 9. | ಬೆರಳಚ್ಚುಗಾರರು | 2 | 3850–7050 | 230330 |
| 10. | ಗ್ರಾಮಕರಣಿಕರು | 26 | 3000–5450 | 230330 |
| 11. | ವಾಹನ ಚಾಲಕರು | 1 | 3000–5450 | 230330 |
| 12. | ಅಟೆಂಡರ್ | 1 | 2775–4950 | 230330 |
| 13. | ಜವಾನರು | 3 | 2775–4950 | 230330 |
| 14. | ಬಾಂದು ಜವಾನರು | 15 | 2500–3850 | 230330 |

**4 ಬಿ (1) XI**

**2006–07ನೇ ಸಾಲಿನ ಆಯವ್ಯಯದ ಬಗ್ಗೆ ಟಿಪ್ಪಣಿ**

ಸುಳ್ಯ ತಾಲೂಕಿಗೆ ಸಂಬಂಧಿಸಿದಂತೆ 2006–07ನೇ ಸಾಲಿನ ಆಯವ್ಯಯದ ಅಂದಾಜು ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವೇತನ ಅಂದಾಜು | ವೇತನೇತರ ಅಂದಾಜು | ಷರಾ |
|---|---|---|---|---|
| 1. | 2053–00–094–7–01<br>ತಾಲೂಕು ಕಛೇರಿ ಸುಳ್ಯ | 3405390–00 | 321000–00 | – |
| 2. | 2506–00–101–1–01 ಭೂಸುಧಾರಣೆ | 167025–00 | 3000–00 | – |
| 3. | 2029–00–103–1–01 ಗ್ರಾಮಲೆಕ್ಕಾಧಿಕಾರಿಗಳು | 2959929–00 | 75000–00 | – |
| 4. | 2029–00–105–1–01 ಭೂಮಾಪನ ಮತ್ತು ಭೂದಾಖಲೆಗಳು | 2751384–00 | 36000–00 | – |
| 5. | 2506–00–101–1–01 ಭೂಸುಧಾರಣೆ ಅಧಿವೇಶನ ಶುಲ್ಕ ವಾರ್ಷಿಕ ಅನುದಾನ | 75000–00 | – | |
| 6. | 2029–00<br>ಗ್ರಾಮಸಹಾಯಕರಿಗೆ ಸಂಭಾವನೆ | 984000–00 | – | |
| 7. | 2029–00 ಕೆಳಗಿನ ಮಟ್ಟದ ನೌಕರರಿಗೆ ಸಂಭಾವನೆ | 31500–00 | – | |
| 8. | 2071– ಮಾಜಿ ಪಟೇಲರಿಗೆ ಸಂಭಾವನೆ | 12000–00 | – | |

ಮೇಲೆ ವಿವರಿಸಿದಂತೆ ಅಗತ್ಯವಿರುವ ಅನುದಾನದ ಅಂದಾಜುಗಳನ್ನು ತಯಾರಿಸಿ ಸರ್ಕಾರದ ಮಂಜೂರಾತಿಗಾಗಿ ಕಳುಹಿಸಲಾಗಿದೆ.

**4 ಬಿ (1) XII**

**ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳು**

– ಅನ್ವಯಿಸುವುದಿಲ್ಲ –

**4 ಬಿ (1) XIII**

**ಇಲಾಖೆಯಲ್ಲಿರುವ ಅಧಿಕಾರ ಪತ್ರದ ವಿಷಯಕ್ಕೆ ಸಂಬಂಧಿಸಿದಂತೆ**

– ಅನ್ವಯಿಸುವುದಿಲ್ಲ –

## 4 ಬಿ (1) XIV

**ಕಛೇರಿಯಲ್ಲಿರುವ ಮಾಹಿತಿಯನ್ನು ವೆಬ್‌ಸೈಟಿನಲ್ಲಿ ನೀಡಿರುವ ಬಗ್ಗೆ ವಿವರ**

ಕಛೇರಿಯಲ್ಲಿ ಪಹಣಿ ಮತ್ತು ಖಾತಾ ಬದಲಾವಣೆಗೆ ಸಂಬಂಧಿಸಿದಂತೆ "ಕಿಯೋಸ್ಕ್ ಕೇಂದ್ರ" ತೆರೆಯಲಾಗಿದ್ದು ಜನರಿಗೆ ಪಹಣಿ, ಪತ್ರಗಳನ್ನು ನೀಡಲಾಗುತ್ತಿದೆ.

## 4 ಬಿ (1) XV

**ಸಾರ್ವಜನಿಕರಿಗೆ ಮಾಹಿತಿಯನ್ನು ನೀಡಲು ಲಭ್ಯವಿರುವ ಸುತ್ತೋಲೆಗಳು ಹಾಗೂ ಗ್ರಂಥಾಲಯಗಳು ಮತ್ತು ವಾಚನಾಲಯಗಳು ಇದ್ದಲ್ಲಿ ಅದರ ವಿವರ:**

ಕಛೇರಿಯಲ್ಲಿ ಪ್ರತೀ ವಿಷಯಕ್ಕೆ ಸಂಬಂಧಿಸಿದಂತೆ ಸುತ್ತೋಲೆಗಳು ಇರುತ್ತವೆ, ಗ್ರಂಥಾಲಯ ಇರುವುದಿಲ್ಲ.

## 4 ಬಿ (1) XVI

**ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರುಗಳು ಪದನಾಮಗಳು ಮತ್ತು ಇತರ ವಿವರಗಳು**

**ಅಧಿಸೂಚನೆ**

**ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕರಣ ಕಲಂ 4 (1) (ಬಿ) ಅನುಸಾರ ಪ್ರಕಟಿಸಬೇಕಾದ ವಿವರಗಳು**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2005ರ (ಸೆಂಟ್ರಲ್ ಆಕ್ಟ್ 22 ಆಫ್ 2005) ಸೆಕ್ಷನ್ 5(1) 5(2) ಮತ್ತು 19(1)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಾಲೂಕು ಕಛೇರಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ತಾಲೂಕು ಕಛೇರಿ ಸುಳ್ಯ | ತಹಶೀಲ್ದಾರರು ಸುಳ್ಯ | ಚುನಾವಣಾ ಶಿರಸ್ತೇದಾರರು ತಾಲೂಕು ಕಛೇರಿ ಸುಳ್ಯ | ಸಹಾಯಕ ಕಮೀಷನರ್ ಪುತ್ತೂರು |
| 2. | ನಾಡಕಛೇರಿ ಪಂಜ | ಉಪತಹಶೀಲ್ದಾರ್ ಪಂಜ | ದ್ವಿ.ದ.ಸ. ನಾಡಕಛೇರಿ ಪಂಜ | ತಹಶೀಲ್ದಾರರು ಪಂಜ |
| 3. | ಕಂದಾಯ ನಿರೀಕ್ಷಕರ ಕಛೇರಿ ಸುಳ್ಯ ಹೋಬಳಿ | ಕಂದಾಯ ನಿರೀಕ್ಷಕರು ಸುಳ್ಯ ಹೋಬಳಿ | ಆಯಾ ಗ್ರಾಮದ ಗ್ರಾಮಕರಣಿಕರು ಸುಳ್ಯ ಹೋಬಳಿ | ತಹಶೀಲ್ದಾರರು ಪಂಜ |
| 4. | ಕಂದಾಯ ನಿರೀಕ್ಷಕರು ಕಛೇರಿ ಪಂಜ ಹೋಬಳಿ | ಕಂದಾಯ ನಿರೀಕ್ಷಕರು ಪಂಜ ಹೋಬಳಿ | ಆಯಾ ಗ್ರಾಮದ ಗ್ರಾಮಕರಣಿಕರು ಪಂಜ ಹೋಬಳಿ | ತಹಶೀಲ್ದಾರರು ಪಂಜ |
| 5. | ಭೂಮಾಪನ ಉಪವಿಭಾಗ ಸುಳ್ಯ | ಪರಿವೀಕ್ಷಕರು ಭೂಮಾಪನಾ ಶಾಖೆ ಸುಳ್ಯ | ಆಯಾ ಗ್ರಾಮದ ಭೂಮಾಪಕರು | ತಹಶೀಲ್ದಾರರು ಪಂಜ |
| 6. | ಆಹಾರ ವಿಭಾಗ ಸುಳ್ಯ | ಆಹಾರ ಶಿರಸ್ತೇದಾರರು ಸುಳ್ಯ | ಆಹಾರ ನಿರೀಕ್ಷಕರು ಸುಳ್ಯ | ತಹಶೀಲ್ದಾರರು ಪಂಜ |

## 4 ಬಿ (1) XVII

**ನಿರ್ದಿಷ್ಟ ಪಡಿಸಬಹುದಾದ ಇತರ ಮಾಹಿತಿಗಳು**

ಕಛೇರಿಯಲ್ಲಿ ಸಾರ್ವಜನಿಕರ ಕುಂದು ಕೊರತೆಗಳ ಬಗ್ಗೆ ಅರ್ಜಿಗಳನ್ನು ಪಡೆದು ಸೂಕ್ತ ಹಿಂಬರಹದ ಮೂಲಕ ಅರ್ಜಿದಾರರಿಗೆ ಮಾಹಿತಿ ನೀಡಲಾಗುತ್ತಿದೆ.

ದಸ್ತಾವೇಜು ಪ್ರತಿಗಳನ್ನು ಆದೇಶದ ನಕಲುಗಳನ್ನು ಪಡೆಯಲು ಇಚ್ಛಿಸಿದಲ್ಲಿ ಅರ್ಜಿಯನ್ನು ಸಲ್ಲಿಸಿ ಇದಕ್ಕಾಗಿ ನಿಗದಿಪಡಿಸಿದ ಶುಲ್ಕವನ್ನು ತುಂಬಿ ಗರಿಷ್ಠ 7 ದಿನಗಳ ಒಳಗಾಗಿ ನಕಲು ಪ್ರತಿಗಳನ್ನು ಪಡೆಯುವ ಸೌಲಭ್ಯವನ್ನು ಒದಗಿಸಿಕೊಡಲಾಗಿದೆ.

ವಹಿಗಳಲ್ಲಿ ನಮೂದಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ಪತ್ರಗಳನ್ನು ನೀಡಲಾಗುವುದು. ಹಾಗೂ ಸಾರ್ವಜನಿಕ ಮನವಿ ಬಗ್ಗೆ ಪ್ರತ್ಯೇಕ ಸ್ವೀಕೃತಪತ್ರವನ್ನು ನೀಡಲಾಗುತ್ತದೆ.

**ಶಿರಸ್ತೇದಾರರು**

ತಾಲೂಕು ಕಛೇರಿಯಲ್ಲಿ ಸಿಬ್ಬಂಧಿ ಮತ್ತು ಲೆಕ್ಕ ಪತ್ರ: ಚುನಾವಣೆ: ಕಂದಾಯ: ಕಾನೂನು: ಶಿಷ್ಟಾಚಾರ: ಸ್ವೀಕೃತಿ ಮತ್ತು ರವಾನೆ ಶಾಖೆಗಳಿಗೆ ಶಿರಸ್ತೇದಾರರು ಇರುತ್ತಾರೆ. ಅವರಿಗೆ ವಹಿಸಲಾದ ಶಾಖೆಯ ಮೇಲ್ವಿಚಾರಣೆ ಮಾಡುತ್ತಾರೆ. ಇವರುಗಳು ಕಛೇರಿಯ ಅಧಿಕಾರಿಗಳಿಗೆ ಅಧೀನ ಸಿಬ್ಬಂಧಿಗಳಾಗಿ ಕಾರ್ಯನಿರ್ವಹಿಸುತ್ತಾರೆ.

**ಕಛೇರಿಯ ಸಿಬ್ಬಂಧಿಗಳ ಸಂಕಲನ ಕರ್ತವ್ಯ ನಿರ್ವಹಣೆಗಳು, ಸಿಬ್ಬಂಧಿ ನೇಮಕಾತಿ: ಶಿಸ್ತಿನ ಕ್ರಮ ಕಾರ್ಯನಿರ್ವಹಣೆ:**

ತಾಲೂಕು ವ್ಯಾಪ್ತಿಯ ಎಲ್ಲಾ ಅಧೀನ ಕಾರ್ಯಾಲಯಗಳು ಮತ್ತು ನಾಡಕಛೇರಿಗಳ ನಿರ್ವಹಣೆ ಮಾಡಲಾಗುವುದು.

ಗ್ರಾಮಸಹಾಯಕರ ನೇಮಕ: ವರ್ಗಾವಣೆಗಳನ್ನು ನಡೆಸುವುದು.

**ನೈಸರ್ಗಿಕ ವಿಕೋಪ**

ಬರ ಮತ್ತು ಅತಿವೃಷ್ಟಿಗಳು ಸಂಭವಿಸಿದಾಗ ತುರ್ತು ರಕ್ಷಣಾ ಕ್ರಮಗಳನ್ನು ಜರುಗಿಸುವುದು ಮತ್ತು ಸಂತ್ರಸ್ತರಿಗೆ ಪರಿಹಾರ ನೀಡಲಾಗುವುದು. ಸಿಡಿಲು ಬಡಿದು ಮೃತಪಟ್ಟ ಕುಟುಂಬದವರಿಗೆ ಪರಿಹಾರ ನೀಡಲು ಮತ್ತು ಬೆಂಕಿ ಆಕಸ್ಮಿಕ ಸಂಭವಿಸಿದಾಗ ಕ್ರಮಕೈಗೊಳ್ಳಲಾಗುತ್ತಿದೆ.

**ಭೂ ಮಂಜೂರಾತಿ:**

ಕಛೇರಿಯಲ್ಲಿ ಭೂಮಂಜೂರಾತಿಯ ಪ್ರಕರಣಗಳಿಗೆ ಸಂಬಂಧಿಸಿದಂತೆ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು. ಅಕ್ರಮ ಸಕ್ರಮದ ಸಮಿತಿಗಳಲ್ಲಿ ಮಂಜೂರಾದ ಪ್ರಕರಣಗಳಿಗೆ ಹಕ್ಕು ಪತ್ರ ನೀಡಲಾಗುತ್ತಿದೆ. ಸರ್ಕಾರಿ ಜಮೀನು ಅನಧಿಕೃತ ಅತಿಕ್ರಮಣ ಮಾಡಿರುವುದನ್ನು ಕ್ರಮ ಜರುಗಿಸಿ ತೆರವುಗೊಳಿಸಲಾಗುವುದು.

**ಭೂಸ್ವಾಧೀನ**

ಭೂಸ್ವಾಧೀನತೆಯ ಪ್ರಕರಣಗಳ ಬಗ್ಗೆ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸಲಾಗುವುದು.

**ಭೂಸುಧಾರಣೆ**

ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರಲ್ಲಿ ಅವಕಾಶವಿದ್ದಂತೆ ಕಲಂ 48 ರಡಿಯಲ್ಲಿ ನೇಮಕವಾದ ಭೂಸುಧಾರಣಾ ಸಮಿತಿಗೆ ಕಾರ್ಯದರ್ಶಿಯಾಗಿ ಕಾನೂನಿನ ಪರಿಮಿತಿಯಲ್ಲಿ ಕೆಲಸ ನಿರ್ವಹಿಸುವುದು.

**ಬೇಡಿಕೆ ವಸೂಲಿ ಬಾಕಿ (ಡಿ.ಸಿ.ಬಿ)**

ಕೃಷಿ ಜಮೀನುಗಳ ಹಿಡುವಳಿಗಳ ಮೇಲೆ ನಿಗದಿ ಪಡಿಸಿದ ಕಂದಾಯ ನೀರಾವರಿ ಕರ ಮತ್ತು ಇತರ ಕಂದಾಯಗಳ ಬೇಡಿಕೆ ಪಟ್ಟಿ ತಯಾರಿಸುವುದು, ವಸೂಲಿ ಮತ್ತು ಬಾಕಿಗಳ ನಿರ್ವಹಣೆ ಕೈಗೊಳ್ಳುವುದು. ಸರ್ಕಾರದ ಇತರೆ ಇಲಾಖೆಗಳಿಂದ ವಸೂಲಿ ಮಾಡದೆ ಇರುವ ತೆರಿಗೆಗಳ ಬಾಕಿಗಳು ಮತ್ತು ಸಾಲಗಳನ್ನು ಬಾಕಿ ಇರುವ ಮೊತ್ತವನ್ನು ಭೂಕಂದಾಯ ಬಾಕಿ ಎಂದು ಪರಿವರ್ತಿಸಿ ವಸೂಲಿ ಕ್ರಮ ಜರುಗಿಸುವುದು.

**ಗಣಿಗಾರಿಕೆ**

ಗಣಿಗಾರಿಕೆ ಸಂಬಂಧಿಸಿದಂತೆ ಪ್ರಕರಣಗಳ ತನಿಖೆ ನಡೆಸಿ ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

**ಜಮಾಬಂದಿ**

ಎಲ್ಲಾ ಕಂದಾಯ ಗ್ರಾಮಗಳ ಜಮೀನುಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಕಂದಾಯ ನಿಗದಿ ವಸೂಲಾತಿ ಮತ್ತು ಬಾಕಿ ವಿವರಗಳನ್ನೊಳಗೊಂಡಂತೆ ಹಾಗೂ ಭೂಕಂದಾಯ ಮಾಡುವ ಮತ್ತು ಸರ್ಕಾರಿ ಜಮೀನುಗಳ ವಿವರಗಳನ್ನೊಳಗೊಂಡಂತೆ ವಾರ್ಷಿಕ ಜಮಾಬಂದಿ ನಡೆಸಲಾಗುವುದು.

ಹುಜೂರು ಜಮಾಬಂದಿಗೆ ಸಂಬಂಧಿಸಿದಂತೆ ಟಿಪ್ಪಣಿ ತಯಾರಿಸಿ ಸಹಾಯಕ ಕಮೀಷನರ್ ಪುತ್ತೂರು ಅಥವಾ ದ.ಕ. ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು.

**ದೇವಸ್ಥಾನ : ವಕ್ಫ್**

ಧಾರ್ಮಿಕ ಮತ್ತು ದತ್ತಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಎಲ್ಲಾ ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಜಿಲ್ಲಾಧಿಕಾರಿಗಳಿಂದ ಬಿಡುಗಡೆಯಾದ ತಸ್ತೀಕ್ ಭತ್ಯೆ ಪಾವತಿಸುವುದು.

ಆರಾಧನಾ ಯೋಜನೆಯಡಿಯಲ್ಲಿ ತಾಲೂಕು ಮಟ್ಟದ ಸಮಿತಿಯನ್ನು ಕರೆದು ಧಾರ್ಮಿಕ ಸಂಸ್ಥೆಗಳಿಗೆ ಅನುದಾನದ ಬಗ್ಗೆ ಶಿಫಾರಸು ಪಡೆದು ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು. ಅನುದಾನ ಮಂಜೂರಾಗಿ ಬಂದ ಧಾರ್ಮಿಕ ಸಂಸ್ಥೆಗಳಿಗೆ ಹಣ ಪಾವತಿಸಿ ಬಳಕೆ ಪ್ರ. ಪತ್ರಗಳನ್ನು ಜಿಲ್ಲಾಧಿಕಾರಿಗಳಿಗೆ ಒಪ್ಪಿಸುವುದು.

**ಲೆಕ್ಕಪತ್ರ**

ಕಛೇರಿಯ ಸಿಬ್ಬಂಧಿ ವೇತನ, ಪ್ರವಾಸ ಭತ್ಯೆ, ಸಾದಿಲ್ವಾರು ವೆಚ್ಚ ವಾಹನಗಳ ಇಂಧನ ಮತ್ತು ದುರಸ್ತಿ ವೆಚ್ಚಗಳಿಗೆ ಮಂಜೂರಾದ ಹಣದ ಬಗ್ಗೆ ಬೆಲೆಗಳ ತಯಾರಿಕೆ ಮತ್ತು ಮೇಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

**ಚುನಾವಣೆ**

ಕೇಂದ್ರ ಚುನಾವಣಾ ಆಯೋಗದಿಂದ ನಿಗದಿ ಪಡಿಸಿದ ಲೋಕಸಭೆ ಚುನಾವಣೆ ಮತ್ತು ವಿಧಾನ ಸಭೆ ಚುನಾವಣೆ ಹಾಗೂ ರಾಜ್ಯ ಸರ್ಕಾರದ ಸ್ಥಳೀಯ ಸಂಸ್ಥೆ ಚುನಾವಣೆಗಳಾದ ತಾಲೂಕು ಪಂಚಾಯತ್ ಗ್ರಾಮ ಪಂಚಾಯತ್, ನಗರ ಪಂಚಾಯತ್‌ಗಳ ಚುನಾವಣೆ ಕಾರ್ಯಸೂಚಿ ಪ್ರಕಾರ ಚುನಾವಣೆ ಕಾರ್ಯಕ್ರಮಗಳನ್ನು ರೂಪಿಸುವುದು. ಚುನಾವಣೆಗೆ ಸಂಬಂಧಿಸಿದ ಅವ್ಯವಹಾರಗಳ ನಿರ್ವಹಣೆ ಮತ್ತು ಮತದಾರರಿಗೆ ಗುರುತು ಚೀಟಿ ನೀಡುವುದು ಹಾಗೂ ಮತದಾರರ ಪಟ್ಟಿಯ ನಿರ್ವಹಣೆ ಮಾಡುವುದು.

**ಸಿ.ಎಂ.ಪಿ**

ಸಾರ್ವಜನಿಕರ ಕುಂದುಕೊರತೆಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಬಂದ ಪತ್ರಕ್ಕೆ ಸಂಬಂಧಿಸಿದಂತೆ ತನಿಖೆ ನಡೆಸಿ ಜಿಲ್ಲಾಧಿಕಾರಿಗಳಿಗೆ ವರದಿ ಒಪ್ಪಿಸುವುದು.

**ಸಭೆ ಮತ್ತು ರಾಷ್ಟ್ರೀಯ ಹಬ್ಬಗಳು**

ತಾಲೂಕಿನಲ್ಲಿ ನಡೆಯುವ ಎಲ್ಲಾ ಉತ್ಸವ ರಾಷ್ಟ್ರೀಯ ಹಬ್ಬಗಳು ಮತ್ತು ತಾಲೂಕು ಅಭಿವೃದ್ಧಿ ಕಾರ್ಯಕ್ರಮ ಬಗ್ಗೆ ಜರುಗುವ ಸಭೆ ಸಮಾರಂಭಗಳನ್ನು ನಿರ್ವಹಣೆ ಮಾಡುವುದು.

**ಅಭಿಲೇಖಾಲಯ:**

ಕಛೇರಿಯ ಪ್ರತಿಯೊಂದು ಶಾಖೆಯಿಂದ ನಿರ್ವಹಣೆಗಾಗಿ ಕಛೇರಿ ಸಹಕಾರದಿಂದ ಬೇರೆ ಬೇರೆ ಬಾಕಿಯ ವಿಲೆಗಳ ಬೇರೆ ಬೇರೆ ವರ್ಗಗಳ ಕಾಗದ ಪತ್ರಗಳ ವ್ಯವಹಾರಗಳನ್ನು ಎಷ್ಟು ಕಾಲ ಕಾಯ್ದಿರಿಸಬೇಕೆಂಬುದನ್ನು ತಿಳಿದು ಈ ಕೆಳಕಾಣಿಸಿದ ಪ್ರಕಾರ ವಿಭಜನೆ ಮಾಡಲಾಗುವುದು ಶ್ರೇಣಿವಾರು ಹೊಂದಿಸಿ ಇಡಲಾಗುವುದು.

‘ಎ’ ಡಿಸ್ – ಅನಿರ್ಧಿಷ್ಟ (ಖಾಯಂ)
‘ಬಿ’ ಡಿಸ್ – 30 ವರ್ಷಗಳು
‘ಸಿ’ ಡಿಸ್ – 10 ವರ್ಷಗಳು
‘ಡಿ’ ಡಿಸ್ – 5 ವರ್ಷಗಳು
‘ಇ’ ಡಿಸ್ – 1 ವರ್ಷಗಳು

ಮೇಲೆ ಕಾಣಿಸಿದ ವಿಲೇವಾರಿಗಳ ಅವಧಿ ಮುಗಿದ ನಂತರ ಕಛೇರಿಯ ಮುಖ್ಯಸ್ಥರ ಆದೇಶವನ್ನು ಪಡೆದು ‘ಎ’ ಮತ್ತು ‘ಬಿ’ ಡಿಸ್‌ಗಳಲ್ಲಿನ ಕಡತಗಳನ್ನು ಹೊರತು ಪಡಿಸಿ ನಾಶಗೊಳಿಸಲಾಗುವುದು.

ಕಾರ್ಯಾಲಯದ ಪೀಠೋಪಕರಣ ಕಾರ್ಯನಿರ್ವಹಣೆ ಯಂತ್ರ ಸಾಮಾಗ್ರಿಗಳ ಖರೀದಿ ಮತ್ತು ದುರಸ್ತಿ ಕಾರ್ಯಾಲಯದ ವ್ಯವಹಾರಕ್ಕೆ ಅವಶ್ಯವಿರುವ ಲೇಖನ ಸಾಮಾಗ್ರಿ ಖರೀದಿ ಮತ್ತು ವಿತರಣೆ ಕಛೇರಿಯ ಸುವ್ಯವಸ್ಥೆ ವಿದ್ಯುದ್ಧೀಕರಣ ನಿರ್ವಹಣೆ ವಿವಿಧ ಕಾಯ್ದೆ ಅಡಿ ಇರುವ ಎಲ್ಲಾ ಪುಸ್ತಕಗಳನ್ನು ಸುಸ್ಥಿತಿಯಲ್ಲಿ ಇಡುವುದು ಮತ್ತು ಸಂಬಂಧಪಟ್ಟ ಕಡತವನ್ನು ನೀಡುವುದು ಅಲ್ಲದೇ ಸಾರ್ವಜನಿಕರು ಕೋರುವ ದಾಖಲೆಗಳನ್ನು ನಿಯಮಾನುಸಾರ ನೀಡಲಾಗುತ್ತದೆ.

**ಸಾಮಾಜಿಕ ಭದ್ರತಾ ಯೋಜನೆ**

ಸಾಮಾಜಿಕ ಭದ್ರತಾ ಯೋಜನೆ ಅಡಿಯಲ್ಲಿ ಬರುವ ಫಲಾನುಭವಿಗಳಿಗೆ ಅನುದಾನ ಜಿಲ್ಲಾಧಿಕಾರಿಗಳಿಂದ ಬಿಡುಗಡೆಯಾದ ನಂತರ ಪಾವತಿಸುವುದು, ವೃದ್ಧಾಪ್ಯ, ಅಂಗವಿಕಲ ವಿಧವಾ ವೇತನದಾರರಿಗೆ ಮಂಜೂರಿ ಪತ್ರ ನೀಡಲಾಗುವುದು. ಜಾತಿ ಆದಾಯ ಮತ್ತು ವಾಸ್ತವ್ಯ ಪ್ರಮಾಣ ಪತ್ರಗಳನ್ನು ವಿತರಣೆ ಮಾಡುವುದು ಮತ್ತು ನಿರ್ವಹಣೆ.

**ಸ್ವೀಕೃತಿ**

ಕಛೇರಿಗೆ ಸ್ವೀಕೃತವಾಗುವ ಸರ್ಕಾರದ ಅಧೀನ ಕಾರ್ಯಾಲಯದ ಮತ್ತು ಜಿಲ್ಲಾಧಿಕಾರಿಗಳ ಮತ್ತು ಸಹಾಯಕ ಕಮೀಷನರ್ ಸಾರ್ವಜನಿಕರ ಮತ್ತು ಸ್ಥಳೀಯ ಸಂಸ್ಥೆಯ ಸದಸ್ಯರುಗಳಿಂದ ಸ್ವೀಕೃತವಾಗುವ ಅರ್ಜಿಗಳಿಗೆ ಮತ್ತು ಪತ್ರಗಳಿಗೆ ತನಿಖೆ ನಡೆಸಿ ಕ್ಲಿಷ್ಟ ಸಮಯದಲ್ಲಿ ಮಾಹಿತಿಯನ್ನು ನೀಡಲಾಗುವುದು.

ತಹಶೀಲ್ದಾರ್,
ಸುಳ್ಯ ತಾಲ್ಲೂಕು, ದ.ಕ

ಪಿ.ಆರ್. 1229

**DISTRICT COURT D.K., MANGALORE**
**NOTIFICATION**
**No. 1/2006, DATED: 20TH JULY 2006**

In exercise of the powers conferred under section 4(b) of the Right to Information Act, 2005 (Central Act No.22 of 2005), the detailed information relating to the District Court, Dakshina Kannada, Mangalore is published as hereunder, for the information of general public:

| | | |
|---|---|---|
| (i) | the particulars of its Organization, functions and duties | Organization: District Court, D.K., Mangalore. Administration of Justice<br>Functions & : Subordinate courts<br>Duties : Administration and Other Administrations. |
| (ii) | the powers and duties of its officers and employees | Details are as at Annexure – 1 |
| (iii) | the procedure followed in the decision making process, including channels of supervision and accountability | The concerned case workers of different sections or branches especially relating to Administration will open a file on receipt of proposal or process the proposal in the form of Submission in the concerned file or in the existing file. The |

| | | |
|---|---|---|
| | | Sheristedars of the concerned branch or Section will scrutinize the proposal and place it before the Chief Administrative Officer. The Chief Administrative Officer will review the proposal in the light of the existing proviso of Rules, Circulars and guide lines of the Hon'ble High Court, submit to the District Judge. The District Judge will decide the course of action to be taken on a proposal under the delegated powers and in doubtful cases if necessary reffer to the Hon'ble High Court, for final decision or guidance. |
| (iv) | the norms set by it for the discharge of its functions | Depending on urgency, proposal will be finalized on priority |
| (v) | the rules, regulations, instructions, manuals and records, held by it or under its control or used by its employees for discharging its functions | Details are as at Annexure – I |
| (vi) | a statement of the categories of documents that are held by it or under its control | Case filed and relevant Registers |
| (vii) | the particulars of any arrangement that exists for consultation with, or representation by, the members of the public in relation to the formulation of its policy or implementation thereof | State Public Information Officer will give information |
| (viii) | a statement of the boards, councils, commitees and other bodies consisting of two or more persons constituted as its part or for the purpose of its advice and as to whether meetings of those boards, councils, commitees and other bodies are open to the public, or the minutes of such meetings are accessible for public | No such statutory committee<br><br>No question of giving information to the public |
| (ix) | a Directory of its officers and employees | List of Officers and employees is in the District Court Establishment. In view of frequent changes of residential address of employees, the District Court Establishment is requested to note the changes. |
| (x) | the monthly remuneration received by each of its officers and employees, including the system of compensation as provided in its regulations | There will be change of monthly pay of one or other officials/Officers every month in view of Annual increment/increase of rate of D.A. Every month the concerned Sheristedar/concerned clerk of Accounts Section will prepare the pay bill after recording the same in the Acquittance roll as an official copy of all employees which contain gross pay, deductions and net pay etc., |
| (xi) | the budget allocated to each of its agency, indicating the particulars of all plans, proposed expenditures and reports on disbursements made | Allotment of the budget will be provided by the Hon'ble High Court of Karnataka under non – plan Scheme whenever the Government will release the fund to the Head of Department. |
| (xii) | the manner of execution of subsidy programmes, including the amounts allocated and the details allocated and the details of beneficiaries of such programmes | No such programmes |

| | | |
|---|---|---|
| (xiii) | particulars of recipients of concessions, permits or authorizations granted by it | No such programmes |
| (xiv) | details in respect of the information, available to or held by it, reduced an electronic form | 1 The Data entry of the cases filed from the date of its filing till disposal will process through computers whenever it is possible. In case of impossibility the same will be processed in the concerned register by manual.<br>2 Pay particulars of all the employees of the District Court Mangalore<br>3 Issue of certified copies by Xerox or Typed copies. |
| (xv) | the particulars of facilities available citizens for obtaining information, including the working hours of a library or reading room if maintained for public use | Library is accessible only to the Hon'ble Judges and Staff but not for Public use.<br>Timing – 9 A.M. to 7 P.M. |
| (xvi) | the names, designations and other particulars of the Public Information Officers | **S.N. Hurakadli** Chief Administrative Officer, State Public Information Officer, District Court, Mangalore.<br>Office - 2444005<br>2445378<br>Res. – 9448818145 |
| (xvii) | such other information as may be prescribed | **NIL** |

BY ORDER OF THE DISTRICT JUDGE
**S.N.HURAKADLI**
Chief Administrative Officer,
District Court, D.K., Mangalore.

**ANNEXURE – I**

The powers and duties of the Officers and employees of the District Court, Mangalore.

| | |
|---|---|
| Chief Administrative Officer | Heads of the Organization Acts, in their capacity as Head of the District Administration upon the advice/directions of the Hon'ble District Judge & the High Court of Karnataka |
| Sheristedars | Incharge of the whole Section/Branch, scrutiny of files submitted by the case workers as per the procedure prescribed. |
| Stenographer/Judgement writer | Typing and Stenography of work entrusted by the Hon'ble Judges |
| First Division Assistant | To attend to the job of case working as per duties cost on them<br>To prepare Decree and to attend Library<br>To Maintain case registers<br>To arrange the case files according to cause list, to note the Stage of cases according to court proceedings in case of attending Bench Work<br>To prepare statements. |
| Second Division Assistant | Incharge of Pending cases<br>To attend open court/any of the clerical work entrusted.<br>To attend Running Index, final Index, first and final entry<br>To arrange the case files according to cause list, to note the Stage of cases according to court proceedings in case of attending Bench Work.<br>To prepare statements |

| | |
|---|---|
| Typist and Typist – copyists | Incharge of typing work both by Machine and computer<br>To do Any of Ministerial work of any section |
| Process Servers | To attend service of summons/Notices and any of the office work relating to Account Section |
| Bailiff | To attend the service of warrants/Injunctions/delivery of possessions and bills of the account Section. |
| Attenders | To keep the Chamber and open Courts Clean and neat<br>To attend the duties of open court and Chamber. |
| Peons | To keep the office neat and tidy<br>To deliver the files/tappals to other sections.<br>To attend watchman duty and any of the work entrusted. |

**ANNEXURE – II**

(v) The rules, regulations instructions, manuals and records, held by it or under its control or used by its employees for discharging its functions:

(a) Acts:

1. The Karnataka Court fee and suit Valuation Act 1958 & Rules 1960.
2. The Karnataka Stamp Act 1957.
3. Civil Rules of Practice 1967
4. Criminal Rules of Practice 1968
5. Civil Court Act 1964.

**ಜಿಲ್ಲಾ ನ್ಯಾಯಾಲಯ ದಕ್ಷಿಣ ಕನ್ನಡ ಮಂಗಳೂರು**

**ಅಧಿಸೂಚನೆ ನಂ. ೧/೨೦೦೬ ದಿನಾಂಕ ೨೦ನೇ ಜುಲೈ ೨೦೦೬.**

**ಮಾಹಿತಿ ಹಕ್ಕು ಅಧಿನಿಯಮ ೨೦೦೫ (ಭಾರತ ಸರಕಾರ ಕಾಯ್ದೆ ನಂ.೨೨/೦೫) ಅಡಿಯಲ್ಲಿಯ ಕಲಂ ೪(೧)(b) ಅಡಿಯಲ್ಲಿ ಜಿಲ್ಲಾ ನ್ಯಾಯಾಲಯ ದಕ್ಷಿಣ ಕನ್ನಡ ಮಂಗಳೂರು ಬಗೆಗೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗಿನಂತೆ ಸಾರ್ವಜನಿಕವಾಗಿ ಮಾಹಿತಿಗಾಗಿ ಪ್ರಕಟಿಸಲಾಗಿದೆ**

| | |
|---|---|
| **ಕೈಪಿಡಿ** ೧ ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು | ಸಂಘಟನೆ ದಕ್ಷಿಣ ಕನ್ನಡ ಮಂಗಳೂರು<br>ಕಾರ್ಯ ಮತ್ತು ಕರ್ತವ್ಯ – ನ್ಯಾಯಾಂಗ ಆಡಳಿತ ಕೆಳ ನ್ಯಾಯಾಲಯಗಳ ಆಡಳಿತ ಮತ್ತು ಇತರ ಆಡಳಿತಗಳು |
| **ಕೈಪಿಡಿ** ೨ ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರಿ ಮತ್ತು ವಿಧಿಗಳ ವಿವರ | ವಿವರಗಳು ಅನುಬಂಧ ೧ರಲ್ಲಿವೆ |
| **ಕೈಪಿಡಿ** ೩ ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು . | ವಿವಿಧ ವಿಭಾಗಗಳಲ್ಲಿ ಅಥವಾ ಶಾಖೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ವಿಷಯ ನಿರ್ವಾಹಕರು ಮುಖ್ಯವಾಗಿ ಆಡಳಿತ ವಿಷಯಕ್ಕೆ ಸಂಬಂಧ ಪಟ್ಟಂತೆ ಪ್ರಸ್ತಾವನೆಗಳನ್ನು ಸ್ವೀಕರಿಸಿದಾಗ ಹಾಗೂ ಸದರಿ ಕಾರ್ಯಗತಗೊಳಿಸುವ ಬಗ್ಗೆ ಒಂದು ಕಡತವನ್ನು ತೆರೆದು ಸದರಿ ಪ್ರಸ್ತಾವನೆಯನ್ನು ಸಂಬಂಧಪಟ್ಟ ಕಡತದಲ್ಲಿ **ಅಥವಾ ಈ**ಗಾಗಲೇ ತೆರೆದಿರುವ ಕಡತದಲ್ಲಿ ನಿವೇದನೆಯನ್ನು ಸಲ್ಲಿಸುವರು. ನಂತರ ಸಂಬಂಧ ಪಟ್ಟ ವಿಭಾಗದ ಅಥವಾ ಶಾಖೆಯಲ್ಲಿ ಶಿರಸ್ತೆದಾರರು ಸದರಿ ಪ್ರಸ್ತಾವನೆ ಃ ನಿವೇದನೆಯನ್ನು ಪರಿಶೀಲಿಸಿ ಮುಖ್ಯ ಆಡಳಿತ ಅಧಿಕಾರಿಯವರ ಸಮಕ್ಷಮ ಮಂಡಿಸುವರು. ಮುಖ್ಯ ಆಡಳಿತ ಅಧಿಕಾರಿಯವರು ಸದರಿ ಪ್ರಸ್ತಾವನೆ ಃ ನಿವೇದನೆಗಳನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮ, ಸುತ್ತೋಲೆ ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ಮಾರ್ಗ ಸೂಚಿಗಳ ಬೆಳಕಿನಲ್ಲಿ ಪರಿಶೀಲಿಸಿ ಜಿಲ್ಲಾ ನ್ಯಾಯಾಧೀಶರುಗಳಿಗೆ ಸಲ್ಲಿಸುವರು. ಜಿಲ್ಲಾ ನ್ಯಾಯಾಧೀಶರು ಯಾವ ಕ್ರಮ ಕೈಗೊಳ್ಳಬೇಕೆಂದು ತಮಗೆ ಪ್ರದತ್ತವಾದ ಅಧಿಕಾರದ ಅಡಿಯಲ್ಲಿ ನಿರ್ಧರಿಸುವರು ಹಾಗೂ ಸಂಶಯಾತ್ಮಕ ಪ್ರಕರಣಗಳಲ್ಲಿ ಸದರಿ ಕಡತವನ್ನು ಅಗತ್ಯವಿದ್ದಲ್ಲಿ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಅಂತಿಮ ತೀರ್ಮಾನಕ್ಕೋಸ್ಕರ ಅಥವಾ ಮಾರ್ಗದರ್ಶನಕ್ಕೋಸ್ಕರ ಕಳುಹಿಸುವರು |
| ಕೈಪಿಡಿ ೪ ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು | ವಿಷಯ ಪ್ರಸ್ತಾವನೆಯ ತುರ್ತನ್ನು ಅವಲಂಬಿಸಿ ಬೇಡಿಕೆಯನ್ನು ಆದ್ಯತೆಯ ಮೇರೆಗೆ ಕೊನೆಗೊಳಿಸಲಾಗುವುದು |
| ಕೈಪಿಡಿ ೫ ಃ ಇಲಾಖೆಯ ಅಧೀನದಲ್ಲಿರುವ ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, | ವಿವರಗಳು ಅನುಬಂಧ ೧ರಲ್ಲಿವೆ |

| | |
|---|---|
| ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ, ಕಛೇರಿ ಕೈಪಿಡಿ, ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು. | |
| ಕೈಪಿಡಿ ೭ ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ವ್ಯವಸ್ಥೆ ಮತ್ತು ವಿವರ. | ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯವರು ಮಾಹಿತಿಗಳನ್ನು ನೀಡುತ್ತಾರೆ |
| ಕೈಪಿಡಿ ೮ ಇಲಾಖೆಯಲ್ಲಿರುವ ನಿಗಮಃ ಪರಿಷತ್ತುಃ ಸಮಿತಿ ಮತ್ತು ಇತರ ಸಂಸ್ಥೆ.ಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಲಭ್ಯವಿರುವ ಬಗ್ಗೆ. | ಅಂಥ ಶಾಸನಾತ್ಮಕ ಸಮಿತಿಗಳಿರುವುದಿಲ್ಲ.<br><br>ಸಾರ್ವಜನಿಕರಿಗೆ ಮಾಹಿತಿ ನೀಡುವ ಪ್ರಶ್ನೆಯೇ ಇಲ್ಲ. |
| ಕೈಪಿಡಿ ೯ ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ | ಅಧಿಕಾರಿಗಳ ಹಾಗೂ ನೌಕರರ ಯಾದಿ ಜಿಲ್ಲಾ ನ್ಯಾಯಾಲಯ ಆಡಳಿತ ವಿಭಾಗದಲ್ಲಿದೆ. ನೌಕರರ ವಾಸ್ತವ್ಯದ ವಿಳಾಸವು ಆಗಾಗ ಬದಲಾಗುತ್ತಿರುವುದರಿಂದ ಜಿಲ್ಲಾ ನ್ಯಾಯಾಲಯದ ಆಡಳಿತ ವಿಭಾಗವು ಸದರಿ ಬದಲಾವಣೆಗಳನ್ನು ಪರಿಗಣಿಸಲು ಕೋರಲಾಗಿದೆ |
| ಕೈಪಿಡಿ ೧೦ ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ಪ್ರತಿ ಫಲ ಮತ್ತು ಅದನ್ನು ನೀಡುವ ಸೂತ್ರಗಳು. | ವಾರ್ಷಿಕ ಭಡ್ತಿ ಃ ತುಟ್ಟಿ ಭತ್ಯ ದರದಲ್ಲಿನ ಹೆಚ್ಚಳದಿಂದಾಗಿ ಒಬ್ಬ ಅಥವಾ ಇತರ ನೌಕರರ ಃ ಅಧಿಕಾರಿಗಳ ಮಾಸಿಕ ವೇತನದಲ್ಲಿ ಬದಲಾವಣೆಗಳಾಗುತ್ತವೆ. ಪ್ರತಿ ತಿಂಗಳು ನಗದು ವಿಭಾಗದ ಸಂಬಂಧಪಟ್ಟ ಶಿರಸ್ತೇದಾರ್ ಃ ಗುಮಾಸ್ತ ಇವರು ವೇತನ ಬಿಲ್ಲನ್ನು ತಯಾರು ಮಾಡುವ ಸಂದರ್ಭದಲ್ಲಿ ಎಲ್ಲಾ ನೌಕರರ ಒಟ್ಟು ವೇತನ, ಕಡತಗಳು, ನಿವ್ವಳ ವೇತನ ಇವುಗಳನ್ನು ವೇತನ ಪಟ್ಟಿಯಲ್ಲಿ ನಮೂದಿಸಿರುವರು. |
| ಕೈಪಿಡಿ ೧೧ ಇಲಾಖೆಯಲ್ಲಿರುವ ವಲಯಃವಿಭಾಗಗಳಿಗೆ ನೀಡುತ್ತಿರುವ ಆಯವ್ಯಯದ ವಿವರಗಳು. | ಸರಕಾರವು ಅರ್ಥಿಕ ಹಂಚಿಕೆಯ ವಿಧಿಯನ್ನು ಇಲಾಖಾ ಮುಖ್ಯಸ್ಥರಿಗೆ ಬಿಡುಗಡೆ ಮಾಡಿದಾಗ ಮಾನ್ಯ ಉಚ್ಚ ನ್ಯಾಯಾಲಯವು ಆಯವ್ಯಯ ಹಂಚಿಕೆಯುನ್ನು ಯೋಜನೇತರ ಅಡಿಯಲ್ಲಿ ಜಿಲ್ಲಾ ನ್ಯಾಯಾಲಯಕ್ಕೆ ನೀಡುವರು. |
| ಕೈಪಿಡಿ ೧೨ ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳಿಗೆ ವಿವರಗಳು | ಅಂಥ ಯಾವುದೇ ಕಾರ್ಯಕ್ರಮಗಳಿರುವುದಿಲ್ಲ |
| ಕೈಪಿಡಿ ೧೩ ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರಿಗಳ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ. | ಅಂಥ ಯಾವುದೇ ಕಾರ್ಯಕ್ರಮಗಳಿರುವುದಿಲ್ಲ |
| ಕೈಪಿಡಿ ೧೫ ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ | ಪೂರ್ವಾಹ್ನ ೯ ರಿಂದ ೭ ಗಂಟೆ ವರೆಗೆ ಗ್ರಂಥಾಲಯವು ಮಾನ್ಯ ನ್ಯಾಯಾಧೀಶರುಗಳಿಗೆ ಹಾಗೂ ನ್ಯಾಯಾಲಯದ ಸಿಬ್ಬಂದಿಗಳ ಉಪಯೋಗಕ್ಕೆ ಲಭ್ಯವಿದ್ದು ಸಾರ್ವಜನಿಕರ ಉಪಯೋಗಕ್ಕೆ ಲಭ್ಯವಿರುವುದಿಲ್ಲ |
| ಕೈಪಿಡಿ ೧೬ ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ, ಮತ್ತು ಇತರ ವಿವರಗಳು. | ಎಸ್.ಎನ್. ಹುರಕಡ್ಲಿ ಮತ್ತು ಆಡಳಿತಾಧಿಕಾರಿಗಳು ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ ಜಿಲ್ಲಾ ನ್ಯಾಯೂಲಯ, ಮಂಗಳೂರು<br>ದೂರವಾಣಿ ೨೪೪೪೦೦೫<br>೨೪೪೫೩೭೮<br>ಮನೆ ೯೪೪೮೮೧೮೧೪೫ |
| ಕೈಪಿಡಿ ೧೭ ಇತರ ವಿವರಗಳು | ಇರುವುದಿಲ್ಲ |

ಜಿಲ್ಲಾ ನ್ಯಾಯಾಧೀಶರ ಆದೇಶದ ಮೇರೆಗೆ
**ಎಸ್.ಎನ್. ಹುರಕಡ್ಲಿ**
ಮುಖ್ಯ ಆಡಳಿತಾಧಿಕಾರಿಗಳು
ಜಿಲ್ಲಾ ನ್ಯಾಯಾಲಯ, ದ.ಕ., ಮಂಗಳೂರು

## ಅನುಬಂಧ – ೧

## ಜಿಲ್ಲಾ ನ್ಯಾಯಾಲಯ ದ.ಕ.ಮಂಗಳೂರು ಇಲ್ಲಿನ ಅಧಿಕಾರಿಗಳ ಹಾಗೂ ನೌಕರರ ಕರ್ತವ್ಯಗಳು ಮತ್ತು ಅಧಿಕಾರಗಳು

| | |
|---|---|
| ಮುಖ್ಯ ಆಡಳಿತ ಅಧಿಕಾರಿ | ಮಾನ್ಯ ಉಚ್ಛ ನ್ಯಾಯಾಲಯ ಮತ್ತು ಜಿಲ್ಲಾ ನ್ಯಾಯಾಧೀಶರ ಸಲಹೆ:ನಿರ್ದೇಶನಗಳ ಮೇರೆಗೆ ಜಿಲ್ಲಾ ಆಡಳಿತದ ಮುಖ್ಯಸ್ಥರಾಗಿ ಕೆಲಸ ನಿರ್ವಹಿಸುತ್ತಾರೆ. |
| ಶಿರಸ್ತೇದಾರ್ | ಸಂಪೂರ್ಣ ವಿಭಾಗ : ಶಾಖೆಯ ಪ್ರಭಾರಧಾರಕರಾಗಿದ್ದು ವಿಷಯ ನಿರ್ವಾಹಕರು ಮಂಡಿಸಿದ ಕಡತಗಳನ್ನು ನಿಗದಿತ ನಿಯಮಾವಳಿಗಳಡಿ ಪರಿಶೀಲಿಸುತ್ತಾರೆ. |
| ಶೀಘ್ರ ಲಿಪಿಗಾರರು : ತೀರ್ಪು ಬರಹಗಾರರು | ಮಾನ್ಯ ನ್ಯಾಯಾಧೀಶರು ತಮಗೆ ವಹಿಸಿ ಕೊಟ್ಟ ಬೆರಳಚ್ಚು ಮತ್ತು ಶೀಘ್ರಲಿಪಿ ಕೆಲಸ ಟೈಪ್ ಮುಖಾಂತರ ಅಥವಾ ಗಣಕಯಂತ್ರದಲ್ಲಿ ನಿರ್ವಹಿಸುವುದು. |
| ಪ್ರಥಮ ದರ್ಜೆ ಸಹಾಯಕ | ತಮಗೆ ವಹಿಸಿಕೊಟ್ಟ ಕಡತಗಳಿಗೆ ಸಂಬಂಧ ಪಟ್ಟಂತೆ ವಿಷಯ ನಿರ್ವಹಣೆ ಡಿಕ್ರಿ ತಯಾರಿಸುವುದು ಮತ್ತು ಗ್ರಂಥ ಭಂಡಾರ ಸಹಾಯಕನಾಗಿ ಕರ್ತವ್ಯ ನಿರ್ವಹಿಸುವುದು. ಕಡತಗಳಿಗೆ ಸಂಬಂಧಪಟ್ಟ ವಹಿಗಳನ್ನು ನಿರ್ವಹಿಸುವು.ದು<br>ನ್ಯಾಯ ಪೀಠದ ಸಹಾಯಕನಾಗಿ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಪ್ರಕರಣಗಳ ಪಟ್ಟಿಯನ್ನು ಸಿದ್ಧ ಪಡಿಸುವುದು. ಹಾಗೂ ಪ್ರಕರಣ ಯಾವ ಹಂತದಲ್ಲಿದೆಯೆಂಬುದನ್ನು ನ್ಯಾಯಾಲಯದ ಕಲಾಪಗಳನ್ವಯ ದಾಖಲಿಸುವುದು<br>ವಿವರಣಾ ಪಟ್ಟಿಗಳನ್ನು ಸಿದ್ಧಪಡಿಸುವುದು |
| ದ್ವಿತೀಯ ದರ್ಜೆ ಸಹಾಯಕ | ಚಾಲ್ತಿ ಕಡತಗಳ ಪ್ರಭಾರ ಧಾರಕನಾಗಿ ಕರ್ತವ್ಯ ನಿರ್ವಹಿಸುವುದು<br>ತೆರೆದ ನ್ಯಾಯಾಲಯದಲ್ಲಿ : ತನಗೆ ವಹಿಸಿಕೊಟ್ಟ ಯಾವುದೇ ಲಿಪಿಕ ಕೆಲಸವನ್ನು ನಿರ್ವಹಿಸುವುದು<br>ಚಾಲ್ತಿ ಕಡತಗಳಲ್ಲಿ : ನಿಖಾಲೆಯಾದ ಕಡತಗಳ ಅನುಕ್ರಮ ಜೋಡಣೆಯ ಕೆಲಸ ನಿರ್ವಹಿಸುವುದು ಪ್ರಥಮ ದಾಖಲೆಯ ಹಾಗೂ ಅಂತಿಮ ತೀರ್ಮಾನದ ವಿವರವನ್ನು ಸಂಬಂಧಿಸಿದ ರಿಜಿಸ್ಟರ್‌ನಲ್ಲಿ ದಾಖಲಿಸುವುದು ಪ್ರಕರಣಗಳ ಪಟ್ಟಿಗಳನ್ನು ತಯಾರಿಸಿ ಆ ಪ್ರಕಾರ ಕಡತಗಳನ್ನು ಜೋಡಿಸುವುದು. ನ್ಯಾಯಪೀಠದ ಸಹಾಯಕನ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಪ್ರಕರಣಗಳ ಹಂತವನ್ನು ಆರ್ಡರ ಶೀಟಿನಲ್ಲಿ ನ್ಯಾಯಾಲಯ ಕಲಾಪಗಳಿಗನ್ವಯವಾಗಿ ನಮೂದಿಸುವುದು.<br>ವಿವರಣಾ ಪಟ್ಟಿ ಸಿದ್ಧ ಪಡಿಸುವುದು. |
| ಬೆರಳಚ್ಚುಗಾರರು ಮತ್ತು ನಕಲು ಬೆರಳಚ್ಚುಗಾರರು | ಬೆರಳಚ್ಚು ಯಂತ್ರ : ಗಣಕಯಂತ್ರ ಮುಖಾಂತರ ಬೆರಳಚ್ಚು ಕೆಲಸ ನಿರ್ವಹಿಸುವುದು<br>ತಮಗೆ ವಹಿಸಿಕೊಟ್ಟ ಯಾವುದೇ ವಿಭಾಗಕ್ಕೆ ಸಂಬಂಧಪಟ್ಟ ಲಿಪಿಕ ಕರ್ತವ್ಯವನ್ನು ಸಹ ನಿರ್ವಹಿಸುವುದು. |
| ಆದೇಶಿಕೆ ಜ್ಯಾರಿಕಾರರು | ನ್ಯಾಯಾಲಯಗಳು ಹೊರಡಿಸಿದ ಸೂಚನಾ ಪತ್ರ : ಕರೆ (Notice/Summons) ಗಳನ್ನು ಜಾರಿಗೊಳಿಸುವುದು ಹಾಗೂ ನಗದು ವಿಭಾಗಕ್ಕೆ ಸಂಬಂಧಪಟ್ಟ ಯಾವುದೇ ಕಚೇರಿ ಕೆಲಸಕ್ಕೆ ಹಾಜರಾಗುವುದು |
| ಬೇಲಿಫ್ | ಮಾನ್ಯ ನ್ಯಾಯಾಲಯಗಳು ಹೊರಡಿಸಿದ ವಾರಂಟ್ : ತಡೆಯಾಜ್ಞೆ : ಸ್ವಾಧೀನ ಅಧಿಪತ್ರಗಳನ್ನು ಜಾರಿಗೊಳಿಸುವುದು ನಗದು ವಿಭಾಗದ ಬಿಲ್‌ಗಳನ್ನು ಹಾಜರುಪಡಿಸುವ ಕರ್ತವ್ಯ ನಿರ್ವಹಿಸುವುದು |
| ಅಟೆಂಡರ್ | ನ್ಯಾಯಾಧೀಶರ ಕೊಠಡಿ ಮತ್ತು ನ್ಯಾಯಾಲಯಗಳನ್ನು ಕ್ರಮ ಬದ್ಧವಾಗಿ ಸ್ವಚ್ಛವಾಗಿಡುವುದು ಹಾಗೂ ಕಲಾಪ ನಡೆದ ಸಂದರ್ಭದಲ್ಲಿ ಕೆಲಸಗಳಿಗೆ ಸಹಕರಿಸುವುದು. ಇನ್ನಿತರ ಯಾವುದೇ ಕೆಲಸ ನಿರ್ವಹಿಸುವುದು. |

| | |
|---|---|
| ಜವಾನ | ತೆರೆದ ನ್ಯಾಯಾಲಯ ಹಾಗೂ ನ್ಯಾಯಾಧೀಶರ ಕೊಠಡಿಯಲ್ಲಿನ ಕರ್ತವ್ಯ ನಿರ್ವಹಿಸುವುದು<br>ಕಚೇರಿಯನ್ನು ಸ್ವಚ್ಛವಾಗಿ ಕಸರಹಿತವಾಗಿಡುವುದು<br>ಕಡತ ಃ ಟಪ್ಪಾಲುಗಳನ್ನು ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ನೀಡುವುದು<br>ತಮಗೆ ವಹಿಸಿಕೊಟ್ಟ ಯಾವುದೇ ಕೆಲಸ ನಿರ್ವಹಿಸುವುದು ರಾತ್ರಿ ಪಹರೆಯ ಕರ್ತವ್ಯ ನಿರ್ವಹಿಸುವುದು |

ತಮ್ಮ ನಿಯಂತ್ರಣದಲ್ಲಿ ಹೊಂದಿರುವ ಅಥವಾ ತಮ್ಮ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ನೌಕರರು ಬಳಸುವ ನಿಯಮಗಳು, ನಿಯಂತ್ರಣಗಳು, ನಿರ್ದೇಶನಗಳು, ಕೈಪಿಡಿ ಮತ್ತು ದಾಖಲೆಗಳು

ಅ) ಕಾಯಿದೆಗಳು

೧. ಕರ್ನಾಟಕ ನ್ಯಾಯಾಲಯ ಶುಲ್ಕ ಮತ್ತು ದಾವೆಗಳ ಮೌಲ್ಯ ಮಾಪನ ಕಾಯಿದೆ ೧೯೫೮ ಮತ್ತು ನಿಯಮಗಳು ೧೯೬೦
೨. ಕರ್ನಾಟಕ ಸ್ಟಾಂಪ್ ಕಾಯಿದೆ ೧೯೫೭
೩. ಕರ್ನಾಟಕ ದಿವಾಣಿ ವ್ಯವಹಾರಿಕ ನಿಯಮಗಳು ೧೯೬೭
೪. ಕರ್ನಾಟಕ ಫೌಜುದಾರಿಕೆ ವ್ಯವಹಾರಿಕ ನಿಯಮಗಳು ೧೯೦೮
೫. ದಿವಾಣಿ ನ್ಯಾಯಾಲಯಗಳ ಕಾಯಿದೆ ೧೯೬೪

ಆ) ನಿಯಮಗಳು

೧. ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರ ಹುದ್ದೆಗಳು) ನೇಮಕಾತಿ ನಿಯಮಗಳು ೧೯೮೨
೨. ಕರ್ನಾಟಕ ನಾಗರೀಕ ಸೇವಾ ನಿಯಮಗಳು ೧೯೫೭.
೩. ಅಧೀನ ನ್ಯಾಯಾಲಯಗಳ ದಿವಾಣಿ ಮತ್ತು ಫೌಜುದಾರಿಕಾ ಲೆಕ್ಕ ನಿಯಮಗಳು ೧೯೬೭.
೪. ಕರ್ನಾಟಕ ನಾಗರೀಕರ ಸೇವೆ (ಸಿ.ಸಿ.ಎ. ನಿಯಮಗಳು) ೧೯೫೭.
೫. ಕರ್ನಾಟಕ ನಾಗರೀಕ ಸೇವೆ (ಖಾಯಂ ಪೂರ್ವ ತರಬೇತಿ) ನಿಯಮಗಳು ೧೯೭೭
೬. ಕರ್ನಾಟಕ ನಾಗರೀಕ ಸೇವೆ (ಭತ್ಯೆ, ವೇತನ ಮತ್ತು ವಿಶ್ರಾಂತಿ ವೇತನಗಳ ನಿಯಂತ್ರಣ ) ನಿಯಮ ೧೯೭೮
೭. ಕರ್ನಾಟಕ ನಾಗರಿಕ ಸೇವೆ (ವೈದ್ಯಕೀಯ ಸಹಾಯಕ) ನಿಯಮಗಳು ೧೯೬೩
೮. ಸಾಮಾನ್ಯ ನೇಮಕಾತಿ ನಿಯಮ ೧೯೭೭
೯. ಕರ್ನಾಟಕ ನಾಗರೀಕ ಸೇವೆ (ಬೆರಳಚ್ಚುಗಾರ ಮತ್ತು ಕಿರಿಯ ಸಹಾಯಕ ಃ ದ್ವಿತೀಯ ದರ್ಜೆ ಸಹಾಯಕ ಹುದ್ದೆ ಬದಲಾವಣೆ) ನಿಯಮಗಳು ೧೯೬೪
೧೦. ಕರ್ನಾಟಕ ನಾಗರೀಕ ಸೇವೆ (ಕಾರ್ಯನಿರ್ವಹಣೆ ವರದಿ) ನಿಯಮಗಳು ೨೦೦೦
೧೧. ಕರ್ನಾಟಕ ನಾಗರೀಕರ ಸೇವೆ (ಜೇಷ್ಟತೆ) ನಿಯಮಗಳು ೧೯೫೭
೧೨. ಕರ್ನಾಟಕ ನಾಗರೀಕ (ಕಾಲನಿಯಮ ಭಡ್ತಿ ಯೋಜನೆ) ನಿಯಮಗಳು ೧೯೮೩
೧೩. ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವೇತನ ಭಡ್ತಿ) ನಿಯಮಗಳು ೧೯೯೧
೧೪. ಸ್ಥಗಿತ ವೇತನ ಭಡ್ತಿ ಮಂಜೂರು ನಿಯಮಗಳು ೧೯೯೬
೧೫. ಕರ್ನಾಟಕ ನಾಗರೀಕ ಸೇವೆ (ಕನ್ನಡ ಭಾಷಾ ಪರೀಕ್ಷೆ) ಕಾಯಿದೆ ೧೯೭೮
೧೬. ವಕೀಲರ ಗುಮಾಸ್ತರ ನಿಯಮಗಳು ೧೯೬೭
೧೭. ದಸ್ತಾವೇಜು ಬರಹಗಾರರ ನಿಯಮ ೧೯೬೬
೧೮. ಪರಿಶಿಷ್ಟ ಜಾತಿಃ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗೆ ನೇಮಕಾತಿಂುಲ್ಲಿ ಮೀಸಲಾತಿ ನಿಯಮಗಳು.

ಇ) ನಿರ್ದೇಶನಗಳು, ಕೈಪಿಡಿ ಇತ್ಯಾದಿ

೧. ಕರ್ನಾಟಕ ಆರ್ಥಿಕ ಸಂಹಿತೆ
೨. ಕರ್ನಾಟಕ ಖಜಾನೆ ಸಂಹಿತೆ
೩. ಸಂಭವನೀಯ ವೆಚ್ಚಗಳ ಕೈಪಿಡಿ
೪. ಪೌಜಿದಾರಿ ಪ್ರಕ್ರಿಯಾ ಸಂಹಿತೆ
೫. ದಿವಾಣಿ ಪ್ರಕ್ರಿಯಾ ಸಂಹಿತೆ
೬. ಭಾರತೀಯ ದಂಡ ಸಂಹಿತೆ
೭. ಆಡಳಿತಾತ್ಮಕ ಕೈಪಿಡಿ
೮. ಮಾಜಿ ಸೈನಿಕರ ಮೀಸಲಾತಿ ನಿರ್ದೇಶನ
೯. ಪರಿಶಿಷ್ಟ ಜಾತಿ ಃ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗೆ ರೋಸ್ಟರ್ ಪ್ರಕಾರ ಮೀಸಲಾತಿ ನಿರ್ದೇಶನಗಳು

ಅವರಲ್ಲಿರುವ ಮತ್ತು ಅಧೀನದಲ್ಲಿರುವ ದಸ್ತಾವೇಜುಗಳ ನಮೂನೆಗಳ ಪಟ್ಟಿ ಗ್ರೂಪ್ ಸಿ ಮತ್ತು ಗ್ರೂಪ್ ಡಿ ನೌಕರರ ಈ ಕೆಳಗೆ ನಮೂದಿಸಿದ ದಸ್ತಾವೇಜುಗಳು :–

೧. ಸೇವಾ ವಹಿಗಳು
೨. ವಾರ್ಷಿಕ ಕಾರ್ಯನಿರ್ವಹಣಾ ವರದಿ
೩. ಆಸ್ತಿ ಮತ್ತು ಹೊಣೆಗಾರಿಕಾ ವಿವರಣಾ ಪಟ್ಟಿ

BY ORDER OF THE DISTRICT JUDGE
**S.N.HURAKADLI**
Chief Administrative Officer,
District Court, D.K., Mangalore.

ಪಿ.ಆರ್. ೧೧೫೫

**ಸಹಾಯಕ ಪೊಲೀಸ್ ಕಮೀಷನರ್ ರವರ ಕಛೇರಿ, ಸಿ.ಸಿ.ಬಿ, ಹೆಚ್ ಅಂಡ್ ಬಿ ದಳ, ಎನ್.ಟಿ. ಪೇಟೆ, ಬೆಂಗಳೂರು ನಗರ.**

**ನಂ. ಸಿಸಿ / 56 / ಸಿಸಿಬಿ : ಹೆಚ್ ಅಂಡ್ ಬಿ ದಳ / 05, ದಿನಾಂಕ 16ನೇ ಆಗಸ್ಟ್ 2006**

**ಬೆಂಗಳೂರು ನಗರ ಸಿ.ಸಿ.ಬಿ. ಹೆಚ್ ಅಂಡ್ ಬಿ ದಳದಲ್ಲಿ ವಾರಸುದಾರರು ಇಲ್ಲದ ಮಾಲುಗಳ ವಿವರ**

| ಕ್ರ.ಸಂ | ಪೊಲೀಸ್ ಠಾಣೆ ಮತ್ತು ಕಲಂ | ಪಿ.ಎಫ್‌ನಂ | ಮಾಲಿನ ವಿವರ |
|---|---|---|---|
| 1 | ಹಲಸೂರುಗೇಟ್ ಪಿಎಸ್ | 30/90 | 1) ಒಂದು ಲೇಡಿಸ್ ಬ್ಯಾಗ್ |
| 2 | ಹಲಸೂರ್‌ಗೇಟ್ ಪಿಎಸ್ 439/90 | 32/90 | 1) 1 ಎಲೆಕ್ಟ್ರಾನಿಕ್ ವಾಚ್ |
| 3 | ಡಿಟೋ | 33/90 | 1) ಒಂದು ಯಾಷಿಕಾ ಕ್ಯಾಮರ |
| 4 | 462/91 | 1/91 | ಒಂದು ಹೇವಿರೆಡಿ ಟಾರ್ಚ್ |
| 5 | ಕೆಂಗೇರಿ ಗೇಟ್ ಪಿ.ಎಸ್ 122/91 | 07/91 | ಒಂದು ಅಲ್ಬಾ ಕೈಗಡಿಯಾರ |
| 6 | ಕಮರ್ಷಿಯಲ್ ಸ್ಟ್ರಿಟ್ ಪಿ.ಎಸ್, ಮೊ.ಸಂ. 40/91 | 24/91 | ಯೂನಿಸೆಫ್ ಕಾರ್ ಸ್ಟೀರಿಯೋ |
| 7 | ಅಶೋಕನಗರ ಪಿಎಸ್ 754/91 | 2/92 | 1 ಟಿ.ಕೆ.ಅರ್. ಕಾರ್‌ಸ್ಟೀರಿಯೊ |
| 8 | ಮಹಾಲಕ್ಷ್ಮಿಲೇಔಟ್ ಪಿಎಸ್ 145/91 | 4/92 | 1 ಚಿಕ್ಕ ಮೂಗುತಿ |
| 9 | –ಡಿಟೋ– | 14/92 | ಎರಡು ಪಯೋನಿರ್ ಸ್ಪೀಕರ್‌ಗಳು |
| 10 | ಬನಶಂಕರಿ ಪಿ.ಎಸ್ 140/92 | 18/92 | 1) ಕೋಡಾಕ್ ಕ್ಯಾಮಾರಾ |
| 11 | ಮಹಾಲಕ್ಷ್ಮಿಪುರ ಪಿಎಸ್ 145/91 | 1/92 | 1) ಒಂದು ಚಿನ್ನದ ನೆಕ್‌ಲೇಸ್ |
| 12 | ಮಹಾಲಕ್ಷ್ಮಿಲೇಔಟ್ ಪಿಎಸ್ 145/91 | 2/92 | 1) 1 ಜೊತೆ ಚಿನ್ನದ ಓಲೆ ತೂಕ. 4.8ಗ್ರಾಂ<br>2) 1 ಜೊತೆ ಚಿನ್ನದ ಉಂಗುರ 8ಗ್ರಾಂ<br>3) 1 ಜೊತೆ ಬೆಳ್ಳಿ ಕಾಲುಂಗುರ |
| 13 | ಮಹಾಲಕ್ಷ್ಮಿಲೇಔಟ್ ಪಿಎಸ್ 145/91 | 3/92 | 1) 3ಜೊತೆ ಬೆಳ್ಳಿಕಾಲು ಚೈನು |
| 14 | ಮಹಾಲಕ್ಷ್ಮಿಲೇಔಟ್ ಪಿಎಸ್ 145/91 | 7/92 | 1) 1ಚಿನ್ನದ ಮಗುವಿನ ಚೈನು ತೂಕ 4.6ಗ್ರಾಂ |
| 15 | –ಡಿಟೋ– | 14/92 | ಕಾರ್ ಟೇಪ್‌ರೆಕಾರ್ಡರ್ |
| 16 | ಬನಶಂಕರಿ ಪಿ.ಎಸ್ 141/92 | 18/92 | ಹೆಚ್.ಇ.ಎಸ್. ಗಡಿಯಾರ |
| 17 | ಬನಶಂಕರಿ ಪಿಎಸ್ 141/92 | 18/92 | 1) 1 ಸ್ಟೇಪ್‌ಲೈಸರ್, 2) 1ಐರನ್ ಬಾಕ್ಸ್, 3) ಅಲರಾಮ್ ಟೈಮ್‌ಪೀಸ್, |
| 18 | ಬನಶಂಕರಿ ಪಿ.ಎಸ್ 141/92 | 18/92 | 1) 1 ಬೈನಾಕ್ಯೂಲರ್ |
| 19 | | 18/92 | 1 ಕಂಪ್ಯೂಟರ್ ವಿಡಿಯೊ ಗೇಮ್ |
| 20 | ಬಸವೇಶ್ವರನಗರ ಪಿ.ಎಸ್ 126/92 | 33/92 | ಒಂದು ಜೊತೆ ಚಿನ್ನದ ಬಳೆ, ಆರೂವರೆ ಗ್ರಾಂ, ಒಂದು ಜೊತೆ ಬೆಳ್ಳಿ ಕಾಲು ಚೈನ್, ಒಂದು ಹವಳ ಹಾಗೂ ಮುತ್ತಿನಸರ |
| 21 | ಬಸವೇಶ್ವರನಗರ ಪಿ.ಎಸ್ 126/92 | 34/92 | ಒಂದು ಕಪಾಲಿ ಉಂಗುರ |
| 22 | ಜೆ.ಪಿ ನಗರ ಪಿ.ಎಸ್, ಮೊ.ಸಂ. 99/2002 | 51/92 | ಒಂದು ಅಹುಜಾ ಟೇಪ್‌ರೆಕಾರ್ಡರ್ |

| ಕ್ರ.ಸಂ | ಪೊಲೀಸ್ ಠಾಣೆ ಮತ್ತು ಕಲಂ | ಪಿ.ಎಫ್‌ನಂ | ಮಾಲಿನ ವಿವರ |
|---|---|---|---|
| 23 | ಸದಾಶಿವನಗರ ಪಿ.ಎಸ್, 420/02 | 85/92 | ಒಂದು ಕವರ್‌ನಲ್ಲಿ ಅಮೆರಿಕಾ ಡಾಲರ್‌ನ ಎರಡು ನಾಣ್ಯಗಳು |
| 24 | ಬನಶಂಕರಿ ಪಿಎಸ್ 259/92 | 49/92 | 1 ಲೇಡಿಸ್ ವಾಚ್ |
| 25 | ಕೆ.ಅರ್.ಪುರ ಪಿಎಸ್ 74/93 | 7/93 | 1 ಬೆಳ್ಳಿ ತೀರ್ಥದ ಬಟ್ಟಲು, 1 ಬೆಳ್ಳಿ ತಟ್ಟೆ 1 ಅಜಂತಾ ಗೋಡೆ ಗಡಿಯಾರ, 11 ಸೀರೆಗಳು, 1 ಐರನ್ ಬಾಕ್ಸ್, |
| 26 | ಸುಬ್ರಮಣ್ಯಪುರ ಪಿಎಸ್ 176/93 | 8/93 | 1ಪ್ಲಾಸ್ಟೀಕ್ ಕವರ್‌ನಲ್ಲಿ ರೇಷ್ಮೆನೂಲುಗಳಿರುವ ಬಾಬೀನ್. |
| 27 | ಡಿಟೋ | 13/93 | 1 ಕಚ್ಚಾ ರೇಷ್ಮೆ ಕಟ್ಟು. |
| 28 | ಬನಶಂಕರಿ ಪಿ.ಎಸ್ | 18/93 | 1) ಸ್ಟೆತೋಸ್ಕೋಪ್ |
| 29 | ಕೆ.ಅರ್.ಪುರಂ ಪಿಎಸ್ 391/92 | 19/93 | 1) 4 ಹಳೆಯ ವಾಚ್‌ಗಳು |
| 30 | ಡಿಟೋ | 20/93 | 1) ಒಂದು ಬಂಗಾರದ ಮುಗುತಿ,<br>2) ಒಂದು ಸಿಟಿಜನ್ ಕೈಗಡಿಯಾರ,<br>3) ಒಂದು ಜೊತೆ ಚಿನ್ನದ ಓಲೆಚಿಕ್ಕದ್ದು. |
| 31 | ಭಾರತಿನಗರ ಪಿಎಸ್ 391/92 | 21/93 | 1) ಒಂದು ಜೊತೆ ಚಿನ್ನದ ಓಲೆ,<br>2) ನಿರ್ಮಲ್ ಬ್ಯಾಂಕರ್ಸ್‌ನ ಪಾನ ಚೀಟಿ. |
| 32 | ಬಸವನಗುಡಿ ಪಿಎಸ್ 143/92 | 63/93 | 1ಉಂಗುರ |
| 33 | ಹಲಸೂರುಗೇಟ್ ಪಿಎಸ್ 439/94 | 36/94 | 1) ಒಂದು ಕೈಗಡಿಯಾರ, 2) ಮೂರು ಕೈಗಡಿಯಾರಗಳು 3) ಒಂದು ಜೊತೆ ಬೆಳ್ಳಿ ಕಾಲುಚೈನು, 4) ಒಂದು ಬೆಳ್ಳಿ ಕೀಬಂಚು |
| 34 | ಹಲಸೂರುಗೇಟ್ ಪಿಎಸ್ 439/94 | 37/94 | 1) 1 ಜೊತೆ ಓಲೆ, 2) ಒಂದು ಚಿನ್ನದ ಉಂಗುರ ಕೆಂಪುಕಲ್ಲು. |
| 35 | ಹಲಸೂರುಗೇಟ್ ಪಿಎಸ್ 439/94 | 82/94 | 1) 1 ಕಪಾಲಿ ಉಂಗುರ |
| 36 | ಹಲಸೂರುಗೇಟ್ ಪಿಎಸ್ 439/94 | 88/94 | 1ರೈನ್‌ಬೋವಾಚ್, 1ಚಿನ್ನದ ಓಲೆ, |
| 37 | ಆರ್.ಎಂ.ಸಿ ಯಾರ್ಡ್ ಪಿ.ಎಸ್. 42/94 | 01/95 | 1) ಮೂರು ಲಾರಿ ಚಕ್ರಗಳು 2) ಎರಡು ಡಿಸ್ಕ್‌ಗಳು, 3) ಒಂದು ಕಾರಿನ ಟಯರ್ ಡಿಸ್ಕ್ ಸಮೇತ |
| 38 | ಹಲಸೂರುಗೇಟ್ ಪಿಎಸ್ 439/94 | 18/95 | 2ಬೆಳ್ಳಿ ಕಾಯಿನ್‌ಗಳು |
| 39 | ಹಲಸೂರುಗೇಟ್ ಪಿಎಸ್ 439/04 | 20/95 | 1ಜೊತೆ ಚಿನ್ನದ ಓಲೆ, ಜುಂಕಿ |
| 40 | ಹಲಸೂರುಗೇಟ್ ಪಿಎಸ್ 439/94 | 25/95 | 1) 2ಲಕ್ಷ್ಮಿ ಚಿತ್ರ ಇರುವ ಬೆಳ್ಳಿಯ ನಾಣ್ಯಗಳು |
| 41 | ಹಲಸೂರುಗೇಟ್ ಪಿಎಸ್ 439/04 | 26/95 | 1ಜೊತೆ ಚಿನ್ನದ ಯ್ಯಾಂಗಿಂಗ್ಸ್, |
| 42 | ಹಲಸೂರುಗೇಟ್ ಪಿಎಸ್ 439/94 | 28/95 | 1) 1ಚಿನ್ನದ ಉಂಗುರ |
| 43 | ಹಲಸೂರುಗೇಟ್ ಪಿಎಸ್ 439/04 | 33/95 | ಕೋನಿಕಾ ಸ್ಟೀರಿಯೊ 2ಇನ್1 |
| 44 | ಹಲಸೂರುಗೇಟ್ ಪಿಎಸ್ 439/94 | 36/95 | 1) 1ಬೆಳ್ಳಿ ಲೋಟ, 1ಬೆಳ್ಳಿ ಕುಂಕಮ ಬಟ್ಟಲು, 1ಬೆಳ್ಳಿ ಪಂಚಾರತಿ, 1ಚಿಕ್ಕ ಬೆಳ್ಳಿ ಕುಂಕುಮ ಬಟ್ಟಲು |
| 45 | ಹಲಸೂರುಗೇಟ್ ಪಿಎಸ್ 439/04 | 88/95 | 1ಕೈಗಡಿಯಾರ, 2ಚಿನ್ನದ ಓಲೆಗಳು |
| 46 | ಮೊ.ಸಂ.462/91 | 04/97 | 1 ಪನಾಸೋನಿಕ್ ಟೇಪ್‌ರೆಕಾರ್ಡರ್ |
| 47 | ಸಿಟಿ ಮಾರ್ಕೇಟ್ ಪಿಎಸ್ 153/96 | 47/97 | 1) 250/–ರೂ ನಗದು ಹಣ. |
| 48 | ಡಿಟೋ | 49/97 | 1) 300.–ರೂ ನಗದು ಹಣ. |

| ಕ್ರ.ಸಂ | ಪೊಲೀಸ್ ಠಾಣೆ ಮತ್ತು ಕಲಂ | ಪಿ.ಎಫ್‌ನಂ | ಮಾಲಿನ ವಿವರ |
|---|---|---|---|
| 49 | ಡಿಟೋ | 50/97 | 1) 240/–ರೂ ನಗದು ಹಣ. |
| 50 | ಹಲಸೂರು ಗೇಟ್ ಪಿ.ಎಸ್ 150/97 | 70/97 | ಒಂದು ಸೀಕೋ ಕೈಗಡಿಯಾರ |
| 51 | ಸದಾಶಿವ ನಗರ ಪಿ.ಎಸ್ 191/97 | 74/97 | ಒಂದು ಚಿನ್ನದ ಸೈಕಲ್ ಚೈನ್ ಡಿಸೈನ್ ಅದರಲ್ಲಿ ಒಂದು ಕಾಸು ಇರುತ್ತದೆ |
| 52 | ಜಯ ನಗರ ಪಿ.ಎಸ್ 79/97 | 92/97 | ಒಂದು ಡಿಜಿಟಲ್ ಕ್ಯಾಮರಾಪ್ಲಸ್ |
| 53 | – | – | ಎರಡು ಹಿತ್ತಾಳೆಯ ಆನೆಗಳು |
| 54 | ವಿಜಯ ನಗರ ಪಿ.ಎಸ್ 644/97 | 105/97 | ಒಂದು ಜೆವಿಸಿ ವಿ.ಸಿ.ಆರ್. |
| 55 | ಎನ್.ಟಿ.ಪೇಟೆ ಪಿ.ಎಸ್ 24/98 | 6/98 | ಒಂದು ಲೈಟ್ ಡ್ರಿಲಿಂಗ್ ಮೆಷಿನ್ |
| 56 | ಎನ್.ಟಿ.ಪೇಟೆ ಪಿ.ಎಸ್. 74/98 | 45/98 | ಒಂದು ಹೇರ್ ಕಂಪ್ರೇಷರ್, ಒಂದು ವೆಲ್ಡಿಂಗ್ ಮಿಷನ್ |
| 57 | ಎನ್.ಟಿ.ಪೇಟೆ ಪಿ.ಎಸ್, 163/98 | 114/98 | ಒಂದು ಬಿ.ಪಿ.ಎಲ್ ಕಲರ್ ಟಿ.ವಿ |
| 58 | ಎನ್.ಟಿ.ಪೇಟೆ ಪಿ.ಎಸ್, 163/98 | 115/98 | 1) ಒಂದು ಬಿ.ಪಿ.ಎಲ್ ಬ್ಲಾಕ್& ವೈಟ್ ಟಿ.ವಿ, 2) ಒಂದು ಓನಿಡಾ ಕಲರ್ ಟಿ.ವಿ, 3) ಒಂದು ಆಸ್ಕರ್ ಕಲರ್ ಟಿ.ವಿ |
| 59 | ಎನ್.ಟಿ.ಪೇಟೆ ಪಿ.ಎಸ್ 163/98 | 115/98 | 1) ಮೆಟಸ್ಕಾನ್ ಎಸ್.ಟಿ.ಡಿ. ಐ.ಡಿ.<br>2) ಒಂದು ಸಾರ್ಪ ಟೇಪ್ ರೆಕಾರ್ಡರ್<br>3) ಒಂದು ಮೆಟಸ್ಕಾನ್ ಎಸ್.ಟಿ.ಡಿ. ಮೆಷನ್<br>4) ಒಂದು ಸಾರ್ಪ್ ವಿಡಿಯೊ ಪ್ಲೇಯರ್<br>5) ಒಂದು ಸ್ಯಾನಿಯೊ ವಿ.ಸಿ.ಆರ್.<br>6) ಒಂದು ಬಿ.ಪಿ.ಎಲ್.ಟೇಪ್ ರೆಕಾರ್ಡರ್ |
| 60 | ಎನ್.ಟಿ.ಪೇಟೆ ಪಿ.ಎಸ್ 163/98 | 115/98 | 1) ಒಂದು ಸೋನಿ ಟೇಪ್ ರೆಕಾರ್ಡರ್<br>2) ನ್ಯಾಷನಲ್ ಪೆನೊಸಾನಿಕ್ ಟೇಪ್ ರೆಕಾರ್ಡರ್ |
| 61 | ಎನ್.ಟಿ.ಪೇಟೆ ಪಿ.ಎಸ್ 163/98 | 115/98 | 1) ಒಂದು ನ್ಯಾಷನಲ್ ಪೆನೊಸಾನಿಕ್ ಟೇಪ್‌ರೆಕಾರ್ಡರ್<br>2) ಒಂದು ಕಾರ್ ಟೇಪ್ ರೆಕಾರ್ಡರ್ |
| 62 | – ಡಿಟೋ – | 125/98 | 1) ಒಂದು ಪೋರ್ಟಬಲ್ ಕಪ್ಪು ಬಿಳುಪು ಟಿ.ವಿ.<br>2) ಹ್ಯಾಂಡಿ ಟಿ.ವಿ. |
| 63 | ಎನ್.ಟಿ.ಪೇಟೆ ಪಿ.ಎಸ್ 163/98 | 125/98 | ಒಂದು ಕಾರ್ ಟೇಪ್ ರೆಕಾರ್ಡರ್ |
| 64 | ಕಬ್ಬನ್‌ಪಾರ್ಕ್ ಪಿಎಸ್ 267/99 | 37/99 | ಒಂದು ನೊಕಿಯಾ ಪೋನ್ |
| 65 | ಕಾಮಾಕ್ಷಿಪಾಳ್ಯ ಪಿ.ಎಸ್ 494/99 | 101/99 | 1) 500/–ರೂ ನಗದು ಹಣ. |
| 66 | ಎನ್.ಟಿ.ಪೇಟೆ.ಪಿ.ಎಸ್. 14/00 | 18/00 | 1) ಒಂದು ಟೈಟಾನ್ ಕೈಗಡಿಯಾರ<br>2)1 ಚಿನ್ನದ ಉಂಗುರ |
| 67 | ಎನ್.ಟಿ.ಪೇಟೆ ಪಿ.ಎಸ್, 96/2000 | 128/2000 | ಒಂದು ಲೈಟ್ ಡ್ರಿಲ್ಲಿಂಗ್ ಮಿಷನ್ |
| 68 | ಬನಶಂಕರಿ.ಪಿ.ಎಸ್. 149/01 | 23/01 | ಒಂದು ಕಾರ್ ಸ್ಟಿರಿಯೋ ಕೆನ್‌ವುಡ್ |
| 69 | ಬನಶಂಕರಿ.ಪಿ.ಎಸ್. 149/01 | 23/01<br><br><br>22/01 | 1) 1 ಸೋನಿ ರಿಮೋಟ್<br>2) 1 ಬಿ.ಪಿ.ಎಲ್. ರಿಮೋಟ್<br>3) 2 ವಾಚ್‌ಗಳು<br>1) 2 ಚಿನ್ನದ ಉಂಗುರಗಳು |

| ಕ್ರ.ಸಂ | ಪೊಲೀಸ್ ಠಾಣೆ ಮತ್ತು ಕಲಂ | ಪಿ.ಎಫ್‌ನಂ | ಮಾಲಿನ ವಿವರ |
|---|---|---|---|
| 70 | ಕೋರಮಂಗಲ ಪಿ.ಎಸ್. 318/02 | 36/02 | ನಾಲ್ಕು ಎಲೆಕ್ಟ್ರಿಕ್ ಮೋಟಾರ್‌ಗಳು |
| 71 | 112/00 ಕಲಂ 379 ಐಪಿಸಿ ಎನ್.ಟಿ.ಪೇಟೆ.ಪಿ.ಎಸ್. | 123/00 | ಒಂದು ಅಶೋಕ್ ಲೈಲಾಂಡ್ ಲಾರಿ6 ಚಕ್ರದ್ದು, Chassis No.MXE375358 Engine No.262136 |
| 72 | ಡಿಟೋ | ಡಿಟೋ | ಒಂದು ಅಶೋಕ್ ಲೈಲಾಂಡ್ ಲಾರಿ 10 ಚಕ್ರದ್ದು, ChassisNo.BXH035093 Engine No.AH071133 |
| 73 | ಬನಶಂಕರಿ.ಪಿ.ಎಸ್. 626/02ಕಲಂ392ಐಪಿಸಿ | 22/02 | ಎಂ.ಇ.ಜಿ-2108ಬಿಳಿ ಬಣ್ಣದ ಅಂಬಾಸಿಡಾರ್ ಕಾರ್ Chassis No.111349556 , Engine No.0433720 |
| 74 | ಎನ್.ಟಿ.ಪೇಟೆ.ಪಿ.ಎಸ್.128/01 | 43/01 | ಎ.ಪಿ.09-ಯು-528 ಒಂದು ಆಟೋ ರಿಕ್ಷಾ ಹರಿಶಿನ ಬಣ್ಣದ್ದು, Engine No.E22D277918 |
| 75 | 128/01 ಎನ್.ಟಿ.ಪೇಟೆ.ಪಿ.ಎಸ್. | 44/01 | ಎ.ಬಿ.ಸಿ.-8372 ಒಂದು ಆಟೋ ರಿಕ್ಷಾ ಹರಿಶಿನ ಬಣ್ಣದ್ದು, Engine No.22E901088558 |
| 76 | 229/99 ರಾಜಾಜಿನಗರ.ಪಿ.ಎಸ್. | 45/99 | ಸಿ.ಎ.ಎ-3813 ಒಂದು ಆಟೋ ರಿಕ್ಷಾ ಹರಿಶಿನ ಬಣ್ಣದ್ದು, ಚಾರ್ಸಿಸ್ ನಂ.22ಸಿ830614804, ಇಂಜಿನ್ ನಂ.22ಇ3806157693 |
| 77 | 43/00 ಕಲಂ 41(ಡಿ) ರೆ/ವಿ 102 ಸಿಆರ್‌ಪಿಸಿ ಮತ್ತು 379 ಐಪಿಸಿ ಎನ್.ಟಿ.ಪೇಟೆ.ಪಿ.ಎಸ್. | 69/00 | ಪಿವೈ-05-6859 ಒಂದು ಮಾರುತಿ ಕಾರ್ ಬಿಳಿ ಬಣ್ಣದ್ದು ಇಂಜಿನ್ ನಂ. ಮತ್ತು ಚಾರ್ಸಿಸ್ ನಂ. ಕಾಣುವುದಿಲ್ಲ. |

ಸಹಾಯಕ ಪೊಲೀಸ್ ಕಮೀಷನರ್,
ಕೇಂದ್ರ ಅಪರಾಧ ವಿಭಾಗ (ಹೆಚ್ ಅಂಡ್ ಬಿ),
ಬೆಂಗಳೂರು ನಗರ - 560 002.

ಪಿ.ಆರ್. 1231

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ.**
**ಸಂ.ಎ೩:ಅವೊ:ಶ್ರೀಗಂಧ:ಬಜಾಜ್ ಎಮ್-೮೦-೨೫೫೩:೨೦೦೫-೦೬, ದಿನಾಂಕ: ೦೫ನೇ ಆಗಸ್ಟ್ ೨೦೦೬.**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಎಮ್-೮೦ ನೊಂದಣಿ ಸಂಖ್ಯೆ KA-೧೪-೨೫೫೩ ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** ೧. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ:ಅವೊಸಬೈ:೧೫೮/೨೦೦೫-೦೬ ದಿನಾಂಕ: ೨೬.೦೯.೨೦೦೫.
೨. ಈ ಪ್ರಾಧಿಕಾರದಿಂದ ಹೊರಡಿಸಲಾದ ದಿನಾಂಕ: ೩೦.೦೧.೨೦೦೬ ರ ಪ್ರಕಟಣೆ ತುಂಗಾ-ತರಂಗ ಸ್ಥಳೀಯ ಕನ್ನಡ ದಿನ ಪತ್ರಿಕೆಯಲ್ಲಿ ದಿನಾಂಕ: ೧೭.೦೨.೨೦೦೬ ರಲ್ಲಿ ಮತ್ತು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: ೩೦.೦೩.೨೦೦೬ ರಂದು ಪ್ರಕಟಿಸಲಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:** ದಿನಾಂಕ: ೨೬.೦೯.೨೦೦೫ ರಂದು ಬೆಳಿಗ್ಗೆ ಸುಮಾರು ೭.೨೫ ಕ್ಕೆ ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆ ಗಾಜನೂರು ತನಿಖಾ ಠಾಣೆಯ ಮೂಲಕ ಹಾದು ಹೋಗಲು ಕಾರನ್ನು ಹಿಂಬಾಲಿಸಿಕೊಂಡು ಬಂದ ಬಜಾಜ್ ಎಮ್-೮೦ ಸವಾರ ತನಿಖಾ ಠಾಣೆಯ ಸಮವಸ್ತ್ರಧಾರಿಗಳನ್ನು ಕಂಡು ವಾಹನವನ್ನು ತಿರುಗಿಸಿಕೊಂಡು ಹೋಗಲು ಪ್ರಯತ್ನಿಸಿದಾಗ ಸಂಶಯಗೊಂಡ ಕರ್ತವ್ಯ ನಿರತ ಸಿಬ್ಬಂದಿಗಳು ವಾಹನವನ್ನು ಬೆನ್ನಟ್ಟಿದ್ದು, ವಾಹನದ ಸವಾರ ವಾಹನವನ್ನು ಬಿಟ್ಟು ಪರಾರಿಯಾಗಿರುತ್ತಾನೆ. ಸದರಿ ವಾಹನವನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ನೋಡಿದಾಗ, ಅದರಲ್ಲಿ ಸುಮಾರು ೧೦.೫೦೦ ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು ಇರುವುದನ್ನು ಕಂಡು, ವಾಹನ (ನೊಂದಣಿ ಸಂಖ್ಯೆ KA-14-K-2553) ಮತ್ತು ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ ೧೯೬೩ ರ ಕಲಂ ೮೬, ೭೧ಎ ಮತ್ತು ಕರ್ನಾಟಕ ಅರಣ್ಯ ಕಾನೂನು ೧೯೬೯ ರ ನಿಯಮ ೧೪೪ ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡು ಮತ್ತು ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ ೧೯೬೩ ರ ಕಲಂ ೭೧ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಂದ ವಾಹನದ "ಬಿ" ಎಕ್ಸ್‌ಟ್ರಾಕ್ಟ್ ಪಡೆದು, ಅದರ ಪ್ರಕಾರ ಸದರಿ ವಾಹನವು ಆಟೋ ರಿಕ್ಷಾ ಕ್ಯಾಬ್‌ಗೆ ಸಂಬಂಧಿಸಿದ ವಾಹನದ ವಾರಸುದಾರರಿಗೆ ನೋಟೀಸ್ ಜಾರಿ ಮಾಡಲಾಗಿರುತ್ತದೆ. ನೋಟೀಸ್ ಪಡೆದ ಈ ವಾಹನದ ಮಾಲೀಕರು KA-14-K-2553 ಬಜಾಜ್ ಎಮ್-೮೦ ವಾಹನ ಆಗಿರದೇ ಆಟೋರಿಕ್ಷಾವಾಗಿದ್ದು, ನನ್ನ

ಆಟೋ ರಿಕ್ಷಾ ಕ್ಯಾಬ್ ನಂಬರನ್ನು ಈ ವಾಹನಕ್ಕೆ ಅಳವಡಿಸಿಕೊಂಡಿರುವುದಾಗಿ, ಸದರಿ ವಾಹನಕ್ಕೂ ನನಗೂ ಸಂಬಂಧವಿಲ್ಲವೆಂದು ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ತಿಳಿಸಿರುತ್ತಾರೆ.

ನಂತರ ಕರ್ನಾಟಕ ಅರಣ್ಯ ೧೯೬೩ ರ ನಿಯಮ ೭೧ಎ ಪ್ರಕಾರ ೩೦ ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲೆಗಳೊಂದಿಗೆ ಹಕ್ಕು ಭಾದ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ? ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ತಿಳುವಳಿಕೆ ಪತ್ರವನ್ನು ಕನ್ನಡ ಸ್ಥಳೀಯ ದಿನ ಪತ್ರಿಕೆಯಾದ ತುಂಗಾ–ತರಂಗದಲ್ಲಿ ದಿನಾಂಕ: ೧೭.೦೨.೨೦೦೬ ರಲ್ಲಿ ಮತ್ತು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: ೩೦.೦೩.೨೦೦೬ ರಲ್ಲಿ ಪ್ರಕಟಿಸಲಾಗಿರುತ್ತದೆ.

ವಾಹನದ ಮಾಲೀಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸಾಕಷ್ಟು ಕಾಲಾವಕಾಶ ಕೊಟ್ಟರೂ ಯಾರೊಬ್ಬರು ವಶಕ್ಕೆ ಇದುವರೆಗೆ ಕೋರದಿರುವುದನ್ನು ನೋಡಿದರೆ ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ ಉಪಯೋಗಿಸಲ್ಪಟ್ಟ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಭೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್.ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ ೧೯೬೩ರ ಸೆಕ್ಷನ ೭೧ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಎಮ್–೮೦ ನಕಲಿ ನೊಂದಣಿ ಸಂಖ್ಯೆ KA-14-K-2553 (ಎಂಜೀನ್ ಸಂಖ್ಯೆ 16E-BDM95788, ಛಾಸ್ಸಿಸ್ ಸಂಖ್ಯೆ 16CBIIM96588) ಮತ್ತು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ೧೦.೫೦೦ ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ ೩೦ ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: ೦೫.೦೮.೨೦೦೬ ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್.ಕರ್ಕೀಕರ್**

ಪಿ.ಆರ್. 1254

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ
ವನ್ಯಜೀವಿ ವಿಭಾಗ, ಶಿವಮೊಗ್ಗ

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ.**

**ಸಂಖ್ಯೆ:ಎ3(ಬಿ1)ಅಮೊ:ಎತ್ತುಗಳು:ಬೀಟೆ:56:2002-03, ದಿನಾಂಕ: 05ನೇ ಆಗಸ್ಟ್ 2006.**

**ಉಪಸ್ಥಿತರು:** ಶ್ರೀ ಜಿ.ಎ.ಎನ್.ಕರ್ಕೀಕರ್,
ಪ್ರಾಧಿಕೃತ ಅಧಿಕಾರಿಗಳು
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ,
ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು.
(ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು:** ಶ್ರೀ ಹೆಚ್.ಟಿ.ಕೃಷ್ಣಮೂರ್ತಿ ಬಿನ್ ತಿಮ್ಮಣ್ಣ,
ಹೊಸಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು.
(ಪರವಾಗಿ ಶ್ರೀ ಎಸ್.ರವಿಕುಮಾರ್, ವಕೀಲರು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ: 30.11.2002 ರ ಸಂಜೆ ಸಕ್ರೆಬೈಲು ವನ್ಯಜೀವಿ ವಲಯ ಕಛೇರಿಗೆ ಬಂದ ಖಚಿತ ವರ್ತಮಾನದ ಮೇರೆಗೆ, ಸಿಬ್ಬಂದಿಗಳು ಕಾರ್ಯಪ್ರವೃತ್ತರಾಗಿ ಹೊನ್ನೆಮರ ಅರಣ್ಯ ಪ್ರದೇಶದಲ್ಲಿ ಗಸ್ತು ಮಾಡುತ್ತಿದ್ದಾಗ, ಸಕ್ರೆಬೈಲು ಮನ್ನಾಜಂಗಲಿ ಕಡೆಯಿಂದ ಹೊನ್ನೆಮರದ ಮಾರ್ಗವಾಗಿ ಟೈರ್ ಗಾಡಿ ಬರುವ ಶಬ್ದ ಕೇಳಿ ಅನುಮಾನಗೊಂಡು ಸಿಬ್ಬಂದಿಗಳು ಪೊದೆಯಲ್ಲಿ ಅಡಗಿ ಕುಳಿತು ಗಾಡಿಯ ಬರುವಿಕೆಗಾಗಿ ಕಾಯುತ್ತಿರುವಾಗ, ಅಲ್ಲಿಗೆ ಬಂದ ಟೈರು ಗಾಡಿಯ ಮೇಲೆ ಬ್ಯಾಟರಿಯಿಂದ ಬೆಳಕು ಹಾಯಿಸಿದಾಗ, ಟೈರುಗಾಡಿಯ ಮೇಲೆ ಕುಳಿತ ಸುಮಾರು 6-7 ಜನರು ಇಲಾಖಾ

ಸಿಬ್ಬಂದಿಗಳನ್ನು ಕಂಡು, ಟೈರುಗಾಡಿಯನ್ನು ವೇಗವಾಗಿ ಓಡಿಸಲು ಪ್ರಾರಂಭಿಸಿರುತ್ತಾರೆ. ಟೈರುಗಾಡಿಯನ್ನು ಬೆನ್ನಟ್ಟಿದ ಸಿಬ್ಬಂದಿಗಳು ಗಾಡಿ ಮತ್ತು ಎತ್ತುಗಳೊಂದಿಗೆ 4 ಜನರನ್ನು ದಸ್ತಗಿರಿ ಮಾಡಿದ್ದು, 3 ಜನ ಪರಾರಿಯಾಗಿರುತ್ತಾರೆ. ನಂತರ ಗಾಡಿಯಲ್ಲಿನ ಅರಣ್ಯ ಉತ್ಪನ್ನವನ್ನು ಪರಿಶೀಲಿಸಿದಾಗ ಅದರಲ್ಲಿ 3 ಬೀಟೆ ತುಂಡುಗಳನ್ನು ಕಂಡು, ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಖಚಿತಪಡಿಸಿಕೊಂಡು ನಂತರ ತುಂಡುಗಳು ಹಾಗೂ ಜೋಡೆತ್ತಿನ ಸಹಿತ ಟೈರುಗಾಡಿಯನ್ನು ಸರ್ಕಾರದಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆ ಸಂಖ್ಯೆ 56:2002-03 ನ್ನು ದಾಖಲು ಮಾಡಿರುತ್ತಾರೆ. ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಬೀಟೆ ತುಂಡು ಮತ್ತು 2 ಎತ್ತುಗಳು ಮತ್ತು 1 ಟೈರಿನ ಗಾಡಿಯನ್ನು 1963ನೇ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರುರವರು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿದ ಮೇರೆಗೆ, 1 ಟೈರುಗಾಡಿ, 2 ಎತ್ತುಗಳು ಮತ್ತು ಅರಣ್ಯೋತ್ಪನ್ನವಾದ 3 ಬೀಟೆ ತುಂಡುಗಳು 0.280 ಘ.ಮೀ. ನ್ನು ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಸುಪರ್ದಿಗೆ ಮುಂದಿನ ಆದೇಶವಾಗುವವರೆಗೂ ಸುರಕ್ಷಿತವಾಗಿ ಇಟ್ಟುಕೊಳ್ಳಲು ಆದೇಶಿಸಲಾಗಿರುತ್ತದೆ. ಹಾಗೂ ಈ ಪ್ರಾಧಿಕಾರವು ದಿನಾಂಕ: 03.12.2002 ರಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಎತ್ತುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇಗೊಳಿಸಿ, ಬಂದ ಮೊತ್ತವನ್ನು ಕಾನೂನು ರೀತ್ಯಾ ಠೇವಣಿಯಾಗಿ ಇಟ್ಟು ವರದಿ ಒಪ್ಪಿಸುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉಪ ವಿಭಾಗ, ಶಿವಮೊಗ್ಗ ಇವರಿಗೆ ಆದೇಶಿಸಲಾಗಿತ್ತು.

ಮುಂದುವರಿದು, ಶ್ರೀ ಹೆಚ್.ಟಿ.ಕೃಷ್ಣಮೂರ್ತಿ ಬಿನ್ ತಿಮ್ಮಣ್ಣ, ಹೊಸಕೊಪ್ಪ ಗ್ರಾಮವಾಸಿ, ಶಿವಮೊಗ್ಗ ತಾಲ್ಲೂಕು ಇವರು ಟೈರು ಗಾಡಿಯ ಮಾಲೀಕರೆಂದು ಹೇಳಿಕೊಂಡು, ಗಾಡಿ ಹಾಗೂ ಎತ್ತುಗಳನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ: 04.12.2002 ರಂದು ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 12.12.2002 ರಂದು ತಮ್ಮ ಲಿಖಿತ ಆಕ್ಷೇಪಣೆಯನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅರ್ಜಿದಾರರ ಅರ್ಜಿಯ ಬಗ್ಗೆ ಕೂಲಂಕುಶವಾಗಿ ಪರಿಶೀಲಿಸಿ, ದಿನಾಂಕ: 26.12.2002 ರಂದು ಕೆಲವು ಷರತ್ತುಗಳನ್ನು ವಿಧಿಸಿ, ರೂ. 10500.00 ಮೊತ್ತದ ಬ್ಯಾಂಕ್ ಗ್ಯಾರಂಟಿ ನೀಡಿ, 2 ಎತ್ತುಗಳನ್ನು ಮಧ್ಯಂತರ ಬಿಡುಗಡೆಗೊಳಿಸಲು ಪ್ರಾಧಿಕಾರ ಆದೇಶ ಹೊರಡಿಸಿರುತ್ತದೆ. ಈ ಪ್ರಾಧಿಕಾರದ ಆದೇಶದ ವಿರುದ್ದ ಎತ್ತುಗಳ ಮತ್ತು ಟೈರುಗಾಡಿಯ ಮಾಲೀಕರು ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ ಮೇರೆಗೆ, ಮಾನ್ಯ ಜಿಲ್ಲಾ ಸತ್ರ ನ್ಯಾಯಾಲಯ ದಿನಾಂಕ: 04.01.2003 ರ ಆದೇಶದಲ್ಲಿ ರೂ. 5000.00 ರ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ ಹಾಗೂ ರೂ. 10500.00 ಮೊತ್ತದ ಸ್ಯೂರಿಟಿ ಪಡೆದು 2 ಎತ್ತುಗಳು ಮತ್ತು 1 ಟೈರುಗಾಡಿಗಳನ್ನು ಬಿಡುಗಡೆ ಮಾಡಲು ಆದೇಶಿಸಿರುತ್ತದೆ. ಇದರಂತೆ, ಅರ್ಜಿದಾರರು ರೂ. 5000.00 ಕ್ಕೆ ರಾಷ್ಟ್ರೀಯ ಉಳಿತಾಯ ಪತ್ರ ಹಾಗೂ ರೂ. 10500.00 ಮೊತ್ತದ ಸ್ಯೂರಿಟಿ ನೀಡಿದಂತೆ ಒಂದು ಟೈರುಗಾಡಿ ಹಾಗೂ 2 ಎತ್ತುಗಳನ್ನು ಅರ್ಜಿದಾರರಿಗೆ ಬಿಡುಗಡೆಗೊಳಿಸಲಾಗಿದೆ.

ನಂತರ ಈ ಪ್ರಕರಣದ ವಿಚಾರಣೆಯನ್ನು ಮಾಡಲಾಗಿರುತ್ತದೆ. ಅಭಿಯೋಜನಾ ಪರ ಒಬ್ಬ ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿದ್ದು, ಈ ಸಾಕ್ಷಿದಾರರ ಹೇಳಿಕೆ ಸಮಯದಲ್ಲಿ ಈ ಕೆಳಕಂಡ ದಾಖಲಾತಿಗಳನ್ನು ಗುರುತಿಸಲಾಗಿರುತ್ತದೆ.

| | | |
|---|---|---|
| 1. ನಿಶಾನೆ ಪಿ–1 | – | ಮಹಜರ್ |
| 2. ನಿಶಾನೆ ಪಿ–2 | – | ಪ್ರಥಮ ಮಾಹಿತಿ ವರದಿ |
| 3. ನಿಶಾನೆ ಪಿ–3 | – | ಅಮಾನತ್ತುವರದಿ |
| 4. ಎಮ್‌ಒ 1 ರಿಂದ 3 | – | ಬೀಟೆ ತುಂಡುಗಳು |
| 5. ಎಮ್‌ಒ 4 | – | ಎತ್ತಿನಗಾಡಿ |

ಅರ್ಜಿದಾರರ ಪರ ವಕೀಲರು ಈ ಮೊಕದ್ದಮೆ ವಿಚಾರಣೆ ಸಂದರ್ಭದಲ್ಲಿ ವಾಹನ ಮಾಲೀಕರಾದ ಶ್ರೀ ಹೆಚ್.ಟಿ.ಕೃಷ್ಣಮೂರ್ತಿ ಬಿನ್ ತಿಮ್ಮಣ್ಣ, ಹೊಸಕೊಪ್ಪ ಗ್ರಾಮ ಇವರನ್ನು ವಿಚಾರಣೆಗೆ ಒಳಪಡಿಸಿದ್ದರು. ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಅರ್ಜಿದಾರರ ವಕೀಲರ ವಾದವನ್ನು ಪರಿಶೀಲಿಸಲಾಗಿರುತ್ತದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸೂಕ್ತ ನಿರ್ಣಯ ನೀಡಲು ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು.

1. ಟೈರುಗಾಡಿಯಲ್ಲಿ ದಿನಾಂಕ: 30.11.2002 ರಂದು ಅಕ್ರಮವಾಗಿ ಬೀಟೆ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಅಮಾನತ್ತು ಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲು ಮಾಡಲಾಗಿರುತ್ತದೆ ಎಂದು ಅಭಿಯೋಜನೆಯು ರುಜುವಾತುಪಡಿಸುತ್ತದೆಯೇ?
2. ಅಮಾನತ್ತುಪಡಿಸಲಾದ ಒಂದು ಟೈರುಗಾಡಿಯಲ್ಲಿ ಮಾಲೀಕರು ಅಕ್ರಮವಾಗಿ ಬೀಟೆ ತುಂಡುಗಳನ್ನು ಸಾಗಾಣಿಕೆಗೆ ಬಳಸಿರುವುದಿಲ್ಲ ಎಂಬುದನ್ನು ಸಾಬೀತುಪಡಿಸುವರೇ ಅಥವಾ ಅಕ್ರಮ ಬೀಟೆ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ಟೈರುಗಾಡಿಯ ಮಾಲೀಕರು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮ ಕೈಗೊಂಡಿರುವರೇ?

3. ಯಾವ ಆದೇಶ?
   ಅ) ಸಕರಾತ್ಮಕ
   ಆ) ನಕರಾತ್ಮಕ
   ಇ) ಕೊನೆಯ ಆದೇಶದಂತೆ.

ಕಾರಣಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಅಂಶ-1:** ಅಭಿಯೋಜನಾ ಪರ ಸಾಕ್ಷಿ ನುಡಿದ ಶ್ರೀ ಎ.ವಿ.ಸತೀಶ್, ವನಪಾಲಕ ಇವರು ದಿನಾಂಕ: 19.06.2004 ರಂದು ನೀಡಿದ ತಮ್ಮ ಸಾಕ್ಷ್ಯದಲ್ಲಿ ನಾನು 2001 ರಿಂದ 2003 ರವರೆಗೆ ಸಕ್ರೆಬೈಲು ವನ್ಯಜೀವಿ ವಲಯದಲ್ಲಿ ವನಪಾಲಕರಾಗಿ ಕರ್ತವ್ಯ ನಿರ್ವಹಿಸಿದ್ದು, ದಿನಾಂಕ: 30.11.2002 ರಂದು ಅರಣ್ಯ ಕಛೇರಿಗೆ ಬಂದ ವರ್ತಮಾನದನ್ವಯ ಸಿಬ್ಬಂದಿಯೊಂದಿಗೆ ಇಲಾಖಾ ವಾಹನದಲ್ಲಿ ಹೊಸಕೊಪ್ಪ ಗ್ರಾಮಕ್ಕೆ ಹೋಗಿ ಅಲ್ಲಿಂದ ಕಾಡಿಗೆ ಹೋಗುವ ತುರುಮಂದಿ ಎನ್ನುವ ಜಾಗಕ್ಕೆ ಹೋಗಿ ವಾಹನವನ್ನು ಮರೆಯಲ್ಲಿ ನಿಲ್ಲಿಸಿ ಕಾಯುತ್ತಾ ಇದ್ದೆವು, ಆನಂತರ ಕಾಡಿನೊಳಗೆ ಹೋಗುತ್ತಿರುವಾಗ ಕಾಡಿನ ಮಧ್ಯೆ ಹೊನ್ನೆಮರ ಎನ್ನುವ ಜಾಗದ ಹತ್ತಿರ ಹೋದಾಗ ಒಂದು ಟೈರುಗಾಡಿ ಬರುತ್ತಿರುವ ಶಬ್ದವನ್ನು ಅಲಿಸಿ, ಮರೆಯಲ್ಲಿ ಅಡಗಿಕೊಂಡು ಗಾಡಿ ಹತ್ತಿರ ಬರುತ್ತಿದ್ದಾಗ ಬ್ಯಾಟರಿ ಬೆಳಕನ್ನು ಗಾಡಿಯ ಮೇಲೆ ಹಾಯಿಸಲಾಯಿತು. ಗಾಡಿಯಲ್ಲಿ ಅಂದಾಜು 5-6 ಜನರಿದ್ದರು. ಗಾಡಿಯನ್ನು ತಡೆದಾಗ, ಅದರಲ್ಲಿದ್ದ ಆಸಾಮಿಗಳಲ್ಲಿ 4 ಜನರನ್ನು ಬೆನ್ನಟ್ಟಿ ಹಿಡಿಯಲಾಯಿತು. ಇನ್ನಿತರ 3 ಜನರು ತಪ್ಪಿಸಿಕೊಂಡಿರುತ್ತಾರೆ. ನಂತರ ಗಾಡಿಯ ಹತ್ತಿರ ಬಂದು ಪರಿಶೀಲಿಸಿದಾಗ ಮೂರು ಬೀಟೆ ತುಂಡು ಇದ್ದು, ಬಂಧಿತ ಆಸಾಮಿಗಳ ಬಗ್ಗೆ ಬೀಟೆ ತುಂಡುಗಳ ಬಗ್ಗೆ ವಿಚಾರಿಸಿದಾಗ ಅವರು ಕಾನೂನು ಬಾಹಿರವಾಗಿ ಕಾಡಿನಿಂದ ಕಡಿದು ತರುತ್ತಿರುವುದಾಗಿ ತಿಳಿಸಿದ ಕಾರಣ ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ನಿಸ್ತಂತು ಮೂಲಕ ಕಛೇರಿಯಿಂದ ಮೊಕದ್ದಮೆ ಸಂಖ್ಯೆಯನ್ನು ಪಡೆದುಕೊಂಡು ಅಮಾನತ್ತುಪಡಿಸಿದ ತುಂಡಿನ ಮೇಲೆ ಕೆಂಪು ಬಣ್ಣದಿಂದ ಕ್ರಮ ಸಂಖ್ಯೆ ಹಾಗೂ ಅರಣ್ಯ ಮೊಕದ್ದಮೆ ಸಂಖ್ಯೆ ಬರೆಯಲಾಗಿರುತ್ತದೆ ಎಂದು ಹಾಗೂ ಮಹಜರ್ ಕಾಲಕ್ಕೆ ಹತ್ತಿರದಲ್ಲಿ ಯಾವುದೇ ಮನೆಯಿಲ್ಲದೇ ಇದ್ದು, ಹಾಗೂ ಅವೇಳೆಯಾದ್ದರಿಂದ ಇಲಾಖೆಯವರೇ ಪಂಚರಾಗಿ ಕಾರ್ಯ ನಿರ್ವಹಿಸಿರುತ್ತೇವೆ. ಮತ್ತು ಬಂಧಿತರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇವೆ ಎಂದು ನುಡಿದಿರುತ್ತಾರೆ. ಮತ್ತು ವಾಹನ ಮತ್ತು ಸ್ವತ್ತನ್ನು ಸದರಿಯವರು ಗುರುತಿಸಿರುತ್ತಾರೆ.

ಮುಂದುವರಿದು ಪಾಟಿ ಸವಾಲಿನಲ್ಲಿ ಉತ್ತರಿಸುತ್ತಾ ದೂರವಾಣಿ ಮುಖಾಂತರ ವರ್ತಮಾನ ಬಂದನಂತರ ಸಿಬ್ಬಂದಿಯೊಂದಿಗೆ ಘಟನಾ ಸ್ಥಳಕ್ಕೆ ಹೋಗಿ ಪೊದೆಯಲ್ಲಿ ಅಡಗಿಕೊಂಡು ಕಾಯುತ್ತಿದ್ದಾಗ, ಕಾಡಿನಿಂದ ಒಂದು ಗಾಡಿಯು ಬರುತ್ತಿರುವುದನ್ನು ಕಂಡು ತಡೆದು ನಿಲ್ಲಿಸುವಾಗ ಗಾಡಿಯಲ್ಲಿದ್ದ 6-7 ಜನರಲ್ಲಿ 4 ಜನರನ್ನು ಬಂಧಿಸಿದ್ದು, ಉಳಿದವರು ತಪ್ಪಿಸಿಕೊಂಡಿರುತ್ತಾರೆ. ನಂತರ ಬಂಧಿಸಿದ ಆಸಾಮಿಯನ್ನು ಗಾಡಿಯ ಹತ್ತಿರ ತಂದು ಪರಿಶೀಲಿಸಿದಾಗ ಗಾಡಿಯಲ್ಲಿ ಅಕ್ರಮ ಬೀಟೆ ನಾಟಾ ಇದ್ದಿದ್ದು ನಿಜವಿದ್ದು, ಈ ಬಗ್ಗೆ ಸಂಬಂಧಿಸಿದ ಆಸಾಮಿಗಳು ಒಪ್ಪಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಘಟನಾ ಸ್ಥಳದಿಂದ ಹೊಸಕೊಪ್ಪ ಗ್ರಾಮ 1.50 ರಿಂದ 2.00 ಕಿ.ಮೀ. ದೂರ ಇದೆ ಎನ್ನುವುದನ್ನು ಗಾಡಿಯನ್ನು ವ್ಯವಸಾಯಕ್ಕಾಗಿ ಉಪಯೋಗಿಸುತ್ತಿದ್ದು, ಬೀಟೆ ಕೇಸು ಹಾಕಿದ್ದಾರೆ ಎನ್ನುವುದನ್ನು ನಿರಾಕರಿಸಿರುತ್ತಾರೆ. ಹಾಗೂ ಆರೋಪಿತರ ಮೇಲೆ ಸುಳ್ಳು ಕೇಸು ಹಾಕಿದ್ದಾರೆ ಎನ್ನುವುದನ್ನು ಸಹ ನಿರಾಕರಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಸಾಕ್ಷಿ ಮತ್ತು ಪುರಾವೆಗಳಿಂದ ವಾಹನ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದನ್ನು ಸಾಬೀತುಪಡಿಸುತ್ತದೆ. ಆದುದರಿಂದ, ಟೈರುಗಾಡಿಯು ದಿನಾಂಕ: 30.11.2002 ರಂದು ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದು ನಿಸ್ಸಂಶಯವಾಗಿ ಸಾಬೀತುಪಡಿಸಲ್ಪಟ್ಟಿದೆ.

**ಅಂಶ-2:** ಟೈರುಗಾಡಿ ಮಾಲೀಕರಾದ ಶ್ರೀ ಕೃಷ್ಣಮೂರ್ತಿ ಬಿನ್ ತಿಮ್ಮಣ್ಣ, ಹೊಸಕೊಪ್ಪ ಗ್ರಾಮ ಇವರು ದಿನಾಂಕ: 04.06.2005 ರಂದು ನ್ಯಾಯಾಲಯದ ಮುಂದೆ ಹಾಜರಾಗಿ ವಕೀಲರ ಮೂಲಕ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ದಿನಾಂಕ: 15.10.2001 ರಂದು ಬೆಳಿಗ್ಗೆ ರಿಪ್ಪನ್‌ಪೇಟೆಗೆ ಹೋಗಿದ್ದೆನು, ಹೊಸಕೊಪ್ಪದಲ್ಲಿ ನನ್ನ ಹೆಂಡತಿ ಹಾಗೂ ತಾಯಿ ಇದ್ದರು. ಆ ದಿವಸ ಸಂಜೆ ಹೊಸಕೊಪ್ಪದ ಜಯಣ್ಣ, ದಸ್ಯನಾಯ್ಕ ಇವರುಗಳು ಗಾಡಿ ತೆಗೆದುಕೊಂಡು ಹೋಗಿದ್ದರು. ರಾತ್ರಿ ಸುಮಾರು 10.00 ಗಂಟೆ ವೇಳೆಯಲ್ಲಿ ನನ್ನ ತಾಯಿಯವರು ಫೋನ್ ಮಾಡಿ ಗಾಡಿ ಎತ್ತನ್ನು ಅರಣ್ಯ ಇಲಾಖೆಯವರು ಹಿಡಿದು ಅರಣ್ಯ ಮೊಕದ್ದಮೆ ದಾಖಲಿಸಿದ್ದಾರೆ ಎಂದು ತಿಳಿಸಿದರು. ಮಾರನೆ ದಿನ ನಾನು ಗಾಜನೂರಿಗೆ ಬಂದೆನು. ಶ್ರೀ ಸತೀಶ್, ವನಪಾಲಕ ಇವರು ನೀನು ಸಹ ಅರಣ್ಯ ಮೊಕದ್ದಮೆಯಲ್ಲಿ ಶಾಮೀಲಾಗಿದ್ದೀಯ ಎಂದು ಹೇಳಿ ಶಿವಮೊಗ್ಗಕ್ಕೆ ಕರೆದುಕೊಂಡು ಬಂದರು. ಶ್ರೀಯುತ ಜಯಣ್ಣ, ದಸ್ಯನಾಯ್ಕ, ಈಶ್ವರ ಹಾಗೂ ನನ್ನನ್ನು ಕೋರ್ಟಿಗೆ ಹಾಜರುಪಡಿಸಿದರು. ನನ್ನ ಎತ್ತು ಗಾಡಿಯನ್ನು ಶ್ರೀಯುತ ಜಯಣ್ಣ ಹಾಗೂ ದಸ್ಯನಾಯ್ಕ ಇವರು ತೆಗೆದುಕೊಂಡು ಹೋಗಿರಲಿಲ್ಲ, ಎತ್ತು ಗಾಡಿ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದು, ಬಿಟ್ಟುಕೊಡುವಂತೆ ಕೋರಿಕೊಂಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರ ಪಾಟೀ ಸವಾಲಿಗೆ ಸಾಕ್ಷ್ಯವನ್ನು ಮುಂದುವರೆಸುತ್ತ, ಮಧ್ಯಂತರ ಬಿಡುಗಡೆಗೆ ಅರ್ಜಿ ಸಲ್ಲಿಸಿದಾಗ ವಕೀಲರಿಗೆ ಅವಶ್ಯ ಮಾಹಿತಿಗಳನ್ನು ಕೊಟ್ಟಿದ್ದೇನೆ ಎಂದು ಒಪ್ಪಿಕೊಂಡಿದ್ದು, ಮರು ವಿಚಾರಣೆಯಲ್ಲಿ ಮಧ್ಯಂತರ ಅರ್ಜಿ ಸಲ್ಲಿಸುವಾಗ ಗುನ್ನೆ ದಿನದಂದು ರಿಪ್ಪನ್‌ಪೇಟೆ ಅಕ್ಕನ ಮನೆಗೆ ಹೋಗಿದ್ದೆನು ಗಾಬರಿಯಲ್ಲಿ ಅರ್ಜಿಯಲ್ಲಿ ಕಾಣಿಸಲು ವಕೀಲರಿಗೆ ಹೇಳಲು ಮರೆತಿದ್ದೇನೆ ಎಂಬುದಾಗಿ ಹೇಳಿರುತ್ತಾರೆ. ಈವರೆವಿಗೂ ಈ ವಿಧಿಯನ್ನು ಈ ಪ್ರಾಧಿಕಾರಕ್ಕೆ ತಿಳಿಸದೇ, ಈಗ ತಿಳಿಸಿರುವುದು ಸಂಶಯಕ್ಕೆ ಎಡೆ ಮಾಡಿದೆ. ಏಕೆಂದರೆ ಅರ್ಜಿದಾರರು

ವಕೀಲರಿಗೆ ಎಲ್ಲಾ ಮಾಹಿತಿಗಳನ್ನು ತಿಳಿಸಿದ್ದೇನೆ ಎಂದು ಹೇಳಿದ್ದು, ಇನ್ನೊಂದು ಬಾರಿ ಅರ್ಜಿಯಲ್ಲಿ ರಿಪ್ಪನ್‌ಪೇಟೆಗೆ ಹೋಗಿರುವುದನ್ನು ಗಾಬರಿಯಿಂದ ಮರೆತಿದ್ದನೆಂದು ಹೇಳಿರುವುದನ್ನು ಗಮನಿಸಿದರೆ ಇದು ಕಟ್ಟುಕಥೆ ಎಂಬುದು ಸಾಭೀತಾಗುತ್ತದೆ. ಕಾರಣ, ಆ ದಿನ ರಿಪ್ಪನ್‌ಪೇಟೆಯಲ್ಲಿ ಇದ್ದೆ ಎಂಬುದನ್ನು ಯಾವ ಸಾಕ್ಷಿಯಿಂದಲೂ ಸಹ ಸಾಬೀತುಪಡಿಸಿರುವುದಿಲ್ಲ. ಹಾಗೂ ಘಟನೆಯ ದಿವಸ ಹೊಸಕೊಪ್ಪದಲ್ಲಿ ಇರಲಿಲ್ಲವೆಂದು ಸಹ ಸಾಭೀತುಪಡಿಸಿರುವುದಿಲ್ಲ. ಈ ಸಂಗತಿಗೆ ಹೊಂದಿಕೊಂಡಂತೆ ಅರ್ಜಿದಾರರು ದಿನಾಂಕ: 04.12.2002 ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವುದಿಲ್ಲದಿರುವುದು ಪುಷ್ಟೀಕೊಡುತ್ತದೆ.

ಇನ್ನೂ ಅಭಿಯೋಗವು ಅರ್ಜಿದಾರನೇ ನೇರವಾಗಿ ತಮ್ಮ ಟೈರುಗಾಡಿಯನ್ನು ಅರಣ್ಯ ಅಪರಾಧದಲ್ಲಿ ತೊಡಗಿಸಿದ್ದಾರೆ ಎನ್ನುವ ಗುರುತರವಾದ ಆರೋಪಣೆಯ ನಿಶಾನೆ-2 ರ ಪ್ರಥಮ ಮಾಹಿತಿ ವರದಿಯನ್ನು ನೋಡಿದಾಗ ಅರ್ಜಿದಾರರೇ ಆರೋಪಿಯಾಗಿ ಬಂಧಿಸಿ, ನ್ಯಾಯಾಲಯಕ್ಕೆ ಒಪ್ಪಿಸಿದ್ದರಿಂದ ರಿಪ್ಪನ್‌ಪೇಟೆಗೆ ಹೋಗಿರಲಿಲ್ಲವೆಂದು ಸಾಭೀತಾಗುತ್ತದೆ, ಹಾಗೂ ಈ ಕೃತ್ಯದಲ್ಲಿ ಭಾಗಿಯಾಗಿದ್ದರು ಎನ್ನುವುದು ಸಹ ನಿಸ್ಸಂಶಯವಾಗಿ ಸ್ಪಷ್ಟ ಪಡುತ್ತದೆ.

ಮುಂದುವರಿದು ವಿಚಾರಣೆಯಲ್ಲಿ ಶ್ರೀ ಜಯಣ್ಣ ಹಾಗೂ ದಸ್ಯನಾಯ್ಕರು ನನ್ನ ಹೆಂಡತಿ ಹಾಗೂ ತಾಯಿಗೆ ಸುಳ್ಳು ಹೇಳಿ ಎತ್ತು ಮತ್ತು ಟೈರುಗಾಡಿಯನ್ನು ತೆಗೆದುಕೊಂಡು ಹೋಗಿದ್ದರು ಎಂಬುದಾಗಿ ತಿಳಿಸಿರುತ್ತಾರೆ. ಮುಂದುವರಿದು, ಈ ಪ್ರಕರಣದ ಇತರೆ ಆರೋಪಿಗಳು ಸೇರಿ 7 ಜನರು ಹೊನ್ನೆಮರ ಅರಣ್ಯ ಪ್ರದೇಶಕ್ಕೆ ಹೋಗಿದ್ದೇವೆ ಎನ್ನುವುದು ಸುಳ್ಳು ಎಂದು ಹೇಳಿರುತ್ತಾರೆ.

ಆದರೆ, ಅಭಿಯೋಜನೆಯ ನಿಶಾನೆ-2-ಪ್ರಥಮ ಮಾಹಿತಿ ವರದಿಯಲ್ಲಿ 4 ಜನರನ್ನು ಬಂಧಿಸಿದ್ದು, ಇನ್ನುಳಿದ 3 ಜನರು ಪರಾರಿಯಾಗಿರುತ್ತಾರೆಂದು ತಿಳಿಸಿದ್ದು, ಇದನ್ನು ಸಮರ್ಥನಾಕಾರಿಯಾಗಿ ಅರ್ಜಿದಾರರು ಟೈರು ಗಾಡಿಯನ್ನು ಶ್ರೀ ಜಯಣ್ಣ ಮತ್ತು ದಸ್ಯನಾಯ್ಕರು ತೆಗೆದುಕೊಂಡು ಹೋಗಿದ್ದಾರೆ ಎನ್ನುವುದು ಅರ್ಜಿದಾರರೇ ತಿಳಿಸಿರುತ್ತಾರೆ. ಶ್ರೀ ಜಯಣ್ಣ ಮತ್ತು ದಸ್ಯನಾಯ್ಕರು ಅರ್ಜಿದಾರರ ಹೆಂಡತಿ ಮತ್ತು ತಾಯಿಯಿಂದ ಪಡೆದ ಟೈರುಗಾಡಿಯನ್ನು ಈ ಅಕ್ರಮ ಕೃತ್ಯಕ್ಕೆ ಬಳಸಿದ್ದು, ಆ ಸಮಯದಲ್ಲಿ ಫಿರ್ಯಾದಿದಾರರು ಬಂಧಿಸಿರುವುದು ಹಾಗೂ ಅರ್ಜಿದಾರರು ಸಹ ಈ ಅಕ್ರಮ ಕೃತ್ಯದಲ್ಲಿ ಪಾಲ್ಗೊಂಡಿರುವುದು ರುಜುವಾತುಪಡಿಸುತ್ತದೆ.

ಮುಂದುವರಿದು, ಟೈರು ಗಾಡಿಯನ್ನು ನನ್ನ ತಾಯಿ ಹಾಗೂ ಹೆಂಡತಿಯವರಿಂದ ಶ್ರೀ ದಸ್ಯನಾಯ್ಕ ಮತ್ತು ಜಯಣ್ಣ ಇವರು ಪಡೆದಿರುತ್ತಾರೆಂದು ಅರ್ಜಿದಾರರು ಹೇಳಿರುವುದರಿಂದ, ಅರ್ಜಿದಾರರ ಪರ ಸಾಕ್ಷಿಯನ್ನಾಗಿ ಶ್ರೀ ಜಯಣ್ಣ ಮತ್ತು ದಸ್ಯನಾಯ್ಕ ಇವರನ್ನು ಒಳಪಡಿಸದೇ ಇರುವುದರಿಂದ ಅರ್ಜಿದಾರರ ಹೇಳಿಕೆಗೆ ಪುಷ್ಟೀ ಬರುವುದಿಲ್ಲ. ಅವರನ್ನು ಸಾಕ್ಷಿಯನ್ನಾಗಿ ಮಾಡಿದ್ದಾರೆ. ಟೈರುಗಾಡಿಯನ್ನು ಪಡೆದುಕೊಂಡು ಎಲ್ಲಿಗೆ ಹೋಗಿದ್ದೆವು ಹಾಗೂ ಅರ್ಜಿದಾರರು ಆ ಸಮಯದಲ್ಲಿ ಎಲ್ಲಿದ್ದರು ಎಂಬ ವಿಷಯ ಸ್ಪಷ್ಟಪಡುತ್ತಿತ್ತು. ಇವರನ್ನು ವಿಚಾರಣೆ ಮಾಡದೇ ಇರುವುದರಿಂದ ಒಂದು ಪ್ರಮುಖ ಲೋಪವೆಂದು ಭಾವಿಸುತ್ತೇನೆ. ಇದರಿಂದ ಅವರ ಹೇಳಿಕೆ ಕಟ್ಟುಕಥೆ ಎಂಬುದು ಸಾಭೀತಾಗುತ್ತದೆ.

ಈ ಮೇಲ್ಕಂಡ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರು / ಮಾಲೀಕರು ಅವರ ತಿಳುವಳಿಕೆಯಿಂದಲೇ ಈ ಕೃತ್ಯ ನಡೆದಿದೆ ಹಾಗೂ ಟೈರುಗಾಡಿಯ ಮಾಲೀಕರು ಈ ಅರಣ್ಯ ಉತ್ಪನ್ನದ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿದ್ದಾರೆ ಹಾಗೂ ಈ ಪ್ರಕರಣದಲ್ಲಿ ಮಾಲೀಕರು ಸಹ ಅಪರಾಧಿಗಳಾಗಿ ನೇರವಾಗಿ ಸಿಕ್ಕುಬಿದ್ದಿರುತ್ತಾರೆ. ಹಾಗೂ ಅವರ ಮೇಲೆ ಕೇಸನ್ನು ನೊಂದಾಯಿಸಿಕೊಂಡು ಕಾನೂನು ಕ್ರಮ ಜರುಗಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುತ್ತಾರೆ. ಅರ್ಜಿದಾರರ/ಮಾಲೀಕರ ಗಮನಕ್ಕೆ ಬಾರದೇ ಈ ಮೇಲ್ಕಂಡ ಪ್ರಕರಣ ನಡೆದಿದೆ ಎನ್ನುವುದನ್ನು ಯಾವುದೇ ಸಾಕ್ಷ್ಯಾಧಾರದಿಂದಲೂ ರುಜುವಾತುಪಡಿಸಿರುವುದಿಲ್ಲ ಬದಲಾಗಿ ಟೈರುಗಾಡಿಯ ಮಾಲೀಕರೇ ಈ ಕೃತ್ಯದಲ್ಲಿ ಆರೋಪಿಗಳಾಗಿರುವುದರಿಂದ ಅಂಶ-2 ಕ್ಕೆ ನಕರಾತ್ಮಕವಾಗಿ ಉತ್ತರಿಸುತ್ತಾ ಅಂಶ-3 ಕ್ಕೆ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

ಈ ಮೇಲ್ಕಂಡ ವಿದ್ಯಾಮಾನಗಳಿಗೆ ಅನುಸಾರವಾಗಿ ಶ್ರೀ ಜಿ.ಎ.ಎನ್.ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು, 1963 ರ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ 1 ಟೈರಿನ ಗಾಡಿ, 2 ಎತ್ತು, 3 ಬೀಟೆ ತುಂಡುಗಳು 0.280 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ. ಸದರಿ 1 ಟೈರಿನ ಗಾಡಿ, 2 ಎತ್ತು, 3 ಬೀಟೆ ತುಂಡುಗಳು 0.280 ಘ.ಮೀ. ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಅರ್ಜಿದಾರರು ಟೈರುಗಾಡಿ ಮತ್ತು ಎತ್ತುಗಳನ್ನು ಮಧ್ಯಂತರ ಬಿಡುಗಡೆ ಪಡೆದ ಕಾಲಕ್ಕೆ ಬರೆದುಕೊಟ್ಟ ಗ್ಯಾರಂಟಿ ಹಾಗೂ ಭದ್ರತೆಗಳು ಎಲ್ಲಾ ರದ್ದಾಗಿರುತ್ತದೆ. ಈ ಪ್ರಕರಣದ ಆಪಾಧಿತರ ಮೇಲೆ ಕ್ರಿಮಿನಲ್ ಮೊಕದ್ದಮೆ ನಡೆಯುತ್ತಿರುವುದರಿಂದ ಸದರಿ ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾಗುವವರೆಗೆ ವಶಪಡಿಸಿ ಕೊಳ್ಳಲಾಗಿರುವ ಬೀಟೆ ತುಂಡುಗಳನ್ನು ಸುರಕ್ಷಿತವಾಗಿ ಕಾಯ್ದಿರಿಸಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ಇದೇ ದಿನ ಅಂದರೆ ದಿನಾಂಕ: 05.08.2006 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಸದರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗೆ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಮೇಲ್ಮನವಿ ಅವಧಿ ಮೀರಿದ ಬಳಿಕ ಮುಟ್ಟುಗೋಲು ಹಾಕಿಕೊಂಡ ಮುದ್ದೆಮಾಲುಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 05.08.2006 ರಂದು ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಜಿ.ಎ.ಎನ್.ಕರ್ಕೀಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ವಿಚಾರಣೆ ಮಾಡಲ್ಪಟ್ಟ ಸಾಕ್ಷಿಗಳು:**

**1. ಅಭಿಯೋಜನಾ ಪರ ಸಾಕ್ಷಿ:**

ಅ) ಶ್ರೀ ಎ.ವಿ.ಸತೀಶ್, ಹಿಂದಿನ ವನಪಾಲಕರು, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಪ್ರಸ್ತುತ ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯ ವಲಯ, ಪಾಂಡವಪುರ.

**2. ನಿಶಾನಿಸಲ್ಪಟ್ಟ ದಾಖಲೆಗಳು:**

| | |
|---|---|
| 1. ಸ್ಥಳ ಮಹಜರ್ | – ನಿಶಾನೆ ಪಿ1 |
| 2. ಪ್ರಥಮ ಮಾಹಿತಿ ವರದಿ | – ನಿಶಾನೆ ಪಿ2 |
| 3. ಅಮಾನತ್ತು ವರದಿ | – ನಿಶಾನೆ ಪಿ3 |
| 4. 3 ಬೀಟೆ ತುಂಡುಗಳು 0.280 ಘ.ಮೀ. | – MO 1 ರಿಂದ 3 |

**3. ಅರ್ಜಿದಾರರ ಪರ ಸಾಕ್ಷಿ ಹಾಗೂ ಗುರುತಿಸಲ್ಪಟ್ಟ ದಾಖಲೆಗಳು:**

ಶ್ರೀ ಹೆಚ್.ಟಿ. ಕೃಷ್ಣಮೂರ್ತಿ ಬಿನ್ ತಿಮ್ಮಣ್ಣ, ಹೊಸಕೊಪ್ಪ ಗ್ರಾಮ – ಗುರುತಿಸಲ್ಪಟ್ಟ ದಾಖಲೆಗಳು ಇಲ್ಲಾ.

ಪಿ.ಆರ್. 1253

**ಲೋಕೋಪಯೋಗಿ ಇಲಾಖೆ**

**ಸೇರ್ಪಡೆ**

**ಸಂ: ಲೋಇ 521 ಸೇಸಎ 2005, ಬೆಂಗಳೂರು, ದಿನಾಂಕ 28ನೇ ಜುಲೈ 2006.**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ 27–4–1978ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ:ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರಿವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ ಶ್ರೀ ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 11–4–2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ಪ್ರಕಟಿಸಲಾಗಿದೆ.

ಶ್ರೀ ಜೆ. ಜಿ. ಶ್ರೀನಿವಾಸ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ರವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಸರ್ಕಾರದ ಅಧಿಸೂಚನೆ ಸಂ. ಲೋಇ 534 ಸೇಸಎ 96 (ಭಾಗ) ದಿನಾಂಕ 5–3–97 ರಲ್ಲಿ, ತಮಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರಡಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದಕ್ಕೆ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಲಾಗಿದೆ ಎಂದು ಹಾಗೂ ಸರ್ಕಾರದ ಅಧಿಸೂಚನೆ ಸಂ. ಲೋಇ 88 ಸೇಸಎ 98 ದಿನಾಂಕ 16–7–99 ರಲ್ಲಿ ತಮ್ಮ ಸ್ವತಂತ್ರ ಪ್ರಭಾರವನ್ನು ಸ್ಥಾನಪನ್ನ ಪದೋನ್ನತಿಯಾಗಿ ಕ್ರಮಬದ್ಧ ಗೊಳಿಸಿ ದಿನಾಂಕ 15–4–97 ಅನ್ನು ಅರ್ಹತಾ ದಿನಾಂಕವೆಂದು ನಿಗಧಿಪಡಿಸಲಾಗಿದ್ದರೂ, ತಮ್ಮ ಹೆಸರನ್ನು ಅಧಿಸೂಚನೆ ಸಂ. ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ದಿನಾಂಕ 11–4–2002ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡದೇ ಕೈಬಿಡಲಾಗಿರುವುದರಿಂದ, ತಮ್ಮ ಜೇಷ್ಠತೆಯನ್ನು ನಿಗಧಿಪಡಿಸಿ ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಸೇರ್ಪಡೆ ಮಾಡಿ ಆದೇಶ ಹೊರಡಿಸಬೇಕಾಗಿ ಕೋರಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂ. ಲೋಇ 534 ಸೇಸಎ 96(ಭಾಗ) ದಿನಾಂಕ 5–3–97 ರಲ್ಲಿ, ಶ್ರೀ ಜೆ.ಜಿ. ಶ್ರೀನಿವಾಸ್, ಸಹಾಯಕ ಇಂಜಿನಿಯರ್, ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರಡಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದಕ್ಕೆ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಲಾಗಿದೆ. ತದನಂತರ ಸರ್ಕಾರದ ಅಧಿಸೂಚನೆ ಸಂ. ಲೋಇ 88 ಸೇಸಎ 98 ದಿನಾಂಕ 16–7–99 ರಲ್ಲಿ, ಇತರರೊಂದಿಗೆ, ಶ್ರೀ ಜೆ.ಜಿ. ಶ್ರೀನಿವಾಸ್, ರವರಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದಕ್ಕೆ ಸ್ಥಾನಪನ್ನ ಪದೋನ್ನತಿ ನೀಡಿ ಕ್ರಮಬದ್ದಗೊಳಿಸಿ ದಿನಾಂಕ 15–4–97 ಅನ್ನು ಅರ್ಹತಾ ದಿನಾಂಕವೆಂದು ನಿಗಧಿಪಡಿಸಲಾಗಿದೆ. ಶ್ರೀ ಜೆ.ಜಿ. ಶ್ರೀನಿವಾಸ್, ರವರಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದಕ್ಕೆ ಸ್ಥಾನಪನ್ನ ಪದೋನ್ನತಿ ನೀಡಿದ ನಂತರ ಸದರಿ ವೃಂದದ ಜೇಷ್ಠತಾ ಪಟ್ಟಿಯನ್ನು, ಶ್ರೀ ಬಡಪ್ಪನವರ್ ಪ್ರಕರಣದಲ್ಲಿ ಮಾನ್ಯ ಸರ್ವೋನ್ನತ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ದಿನಾಂಕ 20–8–2001 ರಂದು ಸರ್ಕಾರದ ಅಧಿಸೂಚನೆ ಸಂ. ಲೋಇ 240 ಸೇಸಎ 2001 ರಲ್ಲಿ ಪ್ರಕಟಿಸಲಾಗಿದ್ದು, ಸದರಿ ಪಟ್ಟಿಯಲ್ಲಿಯೇ ಇವರ ಹೆಸರು ಕೈಬಿಟ್ಟುಹೋಗಿರುತ್ತದೆ. ತತ್‌ಪರಿಣಾಮವಾಗಿ, ಭಾರತ ಸಂವಿಧಾನದ 85ನೇ ತಿದ್ದುಪಡಿಯ ಅನುಸಾರ, ದಿನಾಂಕ 11–4–2002 ರಂದು ಅಧಿಸೂಚನೆ ಸಂ. ಪಿಡಬ್ಲ್ಯೂಡಿ 132 ಎಸ್‌ಎಜಿ 2002 ರಲ್ಲಿ ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕೈಬಿಟ್ಟುಹೋಗಿರುತ್ತದೆ.

ಸರ್ಕಾರದ ಅಧಿಸೂಚನೆ ಸಂ. ಲೋಇ 76 ಸೇಸಕಿ 97 ದಿನಾಂಕ 29–3–2003 ರಂದು ಪ್ರಕಟಿಸಲಾದ ಸಹಾಯಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ, ಶ್ರೀ ಜೆ.ಜಿ. ಶ್ರೀನಿವಾಸ್, ರವರ ಹೆಸರು ಹೊಸ ಜೇಷ್ಠತಾ ಸಂಖ್ಯೆ 2559 ಹಾಗೂ ಹಳೆ ಜೇಷ್ಠತಾ ಸಂಖ್ಯೆ 5930ರಲ್ಲಿ ಪರಿಶಿಷ್ಟ ಜಾತಿಯ ಅಡಿ ಪ್ರತಿಬಿಂಬಿತವಾಗಿದೆ.

ಶ್ರೀ ಜೆ.ಜಿ. ಶ್ರೀನಿವಾಸ್, ರವರಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದಕ್ಕೆ ಸ್ಥಾನಪನ್ನ ಪದೋನ್ನತಿ ನೀಡಿ ಕ್ರಮಬದ್ದಗೊಳಿಸಿ ದಿನಾಂಕ 15–4–97 ಅನ್ನು ಅರ್ಹತಾ ದಿನಾಂಕವೆಂದು ನಿಗಧಿಪಡಿಸಲಾಗಿರುವುದರಿಂದ, ದಿನಾಂಕ 11–4–2002 ರಂದು ಅಧಿಸೂಚನೆ ಸಂ. ಪಿಡಬ್ಲ್ಯೂಡಿ 132 ಎಸ್‌ಎಜಿ 2002ರಲ್ಲಿ ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ, ದಿನಾಂಕ 15–4–97ಅನ್ನೇ ಅರ್ಹತಾ ದಿನಾಂಕವನ್ನಾಗಿ ಪಡೆದ, ಪರಿಶಿಷ್ಟ ಜಾತಿಗೆ ಸೇರಿದ ಹಾಗೂ ಇವರಿಗಿಂತ ಸಹಾಯಕ ಇಂಜಿನಿಯರ್ ವೃಂದದಲ್ಲಿ ಕಿರಿಯರಾದ ಶ್ರೀ ಅರ್ಜುನ ಹನುಮಂತ ಬಡಿಗೇರ, ರವರ ಜೇಷ್ಠತೆಯನ್ನು ಅನುಸರಿಸಿ, ಶ್ರೀ ಜೆ.ಜಿ.ಶ್ರೀನಿವಾಸ್, ರವರ ಜೇಷ್ಠತೆಯನ್ನು

ದಿನಾಂಕ 11–4–2002ರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡಿಸಿ ಪ್ರಕಟಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಶ್ರೀ ಜೆ.ಜಿ. ಶ್ರೀನಿವಾಸ್, ರವರು ಪರಿಶಿಷ್ಟ ಜಾತಿಗೆ ಸೇರಿದ ಅಧಿಕಾರಿಯಾಗಿದ್ದು, ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಅರ್ಜುನ ಹನುಮಂತ ಬಡಿಗೇರ ರವರಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿಗೆ ನಿಗಧಿಪಡಿಸಲಾದ ಅರ್ಹತಾ ದಿನಾಂಕವನ್ನು ಗಣನೆಗೆ ತೆಗೆದುಕೊಂಡು, ಶ್ರೀ ಜೆ.ಜಿ. ಶ್ರೀನಿವಾಸ್, ರವರಿಗೆ ದಿನಾಂಕ 11–4–2002 ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಜೇಷ್ಠತೆಯನ್ನು ನಿಗಧಿಪಡಿಸಲು ಉದ್ದೇಶಿಸಲಾಗಿದೆ. ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: PWD 132 SAG 2002 ದಿನಾಂಕ 11–4–2002ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 2626 ಮತ್ತು 2627 ನಡುವೆ ಕ್ರಮ ಸಂಖ್ಯೆ: 2626ಎ ನ್ನಾಗಿ ಕೆಳಕಂಡಂತೆ ಸೇರ್ಪಡೆ ಮಾಡಲು ಹಾಗೂ ತತ್‌ಪರಿಣಾಮವಾಗಿ, ಜೇಷ್ಠತಾ ಕ್ರ.ಸಂ. 2640, 2711, 2715, ಮತ್ತು 3102 ರಲ್ಲಿ ಪ್ರತಿಬಿಂಬಿತರಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಅರ್ಹತಾ ದಿನಾಂಕವನ್ನು ಈ ಕೆಳಕಂಡಂತೆ ಪುನರ್ ನಿಗದಿಪಡಿಸಲು ಪ್ರಸ್ತಾಪಿಸಿದೆ.

| AEE Grd No. | List No. | AEE Grd No. | Name of the Engineer | SC/ ST | Date of Birth | AEE Promotion Date | AEE Eligibility Date | Remarks |
|---|---|---|---|---|---|---|---|---|
| 2626A | 2 | 5930 | J.G. Srinivas | SC | 01/01/55 | 16/07/99 | 15/04/1997 | |
| xxx | xx | xxx | xxxx | xx | xxx | xxxx | xxxx | |
| 2640 | 2 | 6101 | Nagasundar HS | SC* | 18/05/62 | 15/04/97 | 11/07/1997 | |
| xxx | xx | xxx | xxxx | xxx | xxx | xxxx | xxxx | |
| 2711 | 2 | 6114 | Jayaramaiah V | SC* | 01/04/56 | 15/04/97 | 23/08/1997 | |
| xxx | xx | xxx | xxxx | xx | xxx | xxxx | xxxx | |
| 2715 | 2 | 6115 | Ravikumar N | SC* | 16/05/60 | 15/04/97 | 25/09/2001 | |
| xxx | xx | xxx | xxxx | xx | xxx | xxxx | xxxx | |
| 3102 | 2 | 6352 | Mahadevaswamy M | SC* | 27/07/59 | 06/09/97 | To be fixed | |

ಮೇಲ್ಕಂಡ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1)ರ ವೃಂದದಲ್ಲಿ ಅರ್ಹತಾ ದಿನಾಂಕ ಹಾಗೂ ಜೇಷ್ಠತಾ ಪಟ್ಟಿಗಳಲ್ಲಿ ಕ್ರಮ ಸಂಖ್ಯೆ: 2626A ಆಗಿ ಸೇರ್ಪಡೆ ಮಾಡುವುದರಿಂದ ಹಾಗೂ ತತ್‌ಪರಿಣಾಮವಾಗಿ ಜೇಷ್ಠತಾ ಕ್ರ.ಸಂ. 2640, 2711, 2715, ಮತ್ತು 3102 ರಲ್ಲಿ ಪ್ರತಿಬಿಂಬಿತರಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಅರ್ಹತಾ ದಿನಾಂಕವನ್ನು ಪುನರ್ ನಿಗದಿಪಡಿಸುವುದರಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ : ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಗಳೊಂದಿಗೆ ಈ ತಿದ್ದುಪಡಿಯು ಪ್ರಕಟವಾದ ದಿನಾಂಕದಿಂದ 15 ದಿನಗಳೊಳಗಾಗಿ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ.ಎಂ. ಲಕ್ಷ್ಮೀನಾರಾಯಣ
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು–ಎ).

ಪಿ.ಆರ್. 1215

## ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು

### ಅಧಿಸೂಚನೆ

**ನಂ. ಎಲ್‌ಎನ್‌ಡಿ : ಸಿಆರ್ : 6 : 04–05, ದಿನಾಂಕ: 14ನೇ ಜುಲೈ 2006**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಅಡಿಯಲ್ಲಿನ ಕಲಂ 68(1) ರಡಿಯಲ್ಲಿ ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966 ರ ಅಡಿಯಲ್ಲಿನ ನಿಯಮ 94 ರ ರಡಿಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಗೊಟ್ಟಿಗೆರೆ ಸರ್ವೆ ನಂ. 53 ರಲ್ಲಿರುವ 'ಬಿ' ಖರಾಬು 0–19 ಗುಂಟೆ ವಿಸ್ತೀರ್ಣ ಜಮೀನು ರಸ್ತೆ ಹಾಗೂ ಹಳ್ಳದ ಖರಾಬು ಎಂದು ವರ್ಗೀಕೃತವಾಗಿದ್ದು, ಸದರಿ ಜಮೀನನ್ನು ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿರುವುದರಿಂದ ಸದರಿ ಜಮೀನಿನ ಸಾರ್ವಜನಿಕರ ಅಥವಾ ಯಾವುದೇ ವ್ಯಕ್ತಿಯ : ಗಳ ಹಿತಾಸಕ್ತಿಯು ಇರುವುದಿಲ್ಲವೆಂದು ಪರಿಗಣಿಸಿ ಅದರಲ್ಲಿನ ಸಾರ್ವಜನಿಕ ಹಕ್ಕು ಹಿತಾಸಕ್ತಿಯನ್ನು ನಿವೃತ್ತಿಗೊಳಿಸಲು ನಿರ್ಧರಿಸಲಾಗಿದೆ.

ಯಾವುದೇ ವ್ಯಕ್ತಿಯ ಅಥವಾ ವ್ಯಕ್ತಿಗಳು ಅಲ್ಲದೆ ಸಾರ್ವಜನಿಕರು ಸದರಿ ಜಮೀನಿನ ಸಾರ್ವಜನಿಕ ಹಕ್ಕನ್ನು ರದ್ದುಪಡಿಸುವುದರ ಬಗ್ಗೆ ತಮ್ಮದೇ ಆದ ಯಾವುದೇ ವಿಧವಾದ ಏನಾದರೂ ಆಕ್ಷೇಪಣೆಗಳಿದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 90 ದಿವಸಗಳೊಳಗಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು ತಹಸೀಲ್ದಾರ್ ರವರಿಗೆ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ.

ತಹಸೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

ಪಿ.ಆರ್. 1442

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ

### ಅಧಿಸೂಚನೆ

**ಸಂ: ಬಿ3:ಅಮೊ.ವಾಹನ.14/06-07, ದಿನಾಂಕ: 5ನೇ ಸೆಪ್ಟೆಂಬರ್ 2006**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | Ambassador Car KA-14 M-417 | ಶಿಕಾರಿಪುರ ವಲಯ ಅಮೊ ಸಂ: 69/06-07, ದಿ: 15.8.2006 | H3027002 | 111-646577 |
| 2. | Bajaj CT 100 KA-31-K-5035 | ಸೊರಬ ವಲಯ ಇವರ ಅಮೊ ಸಂ: 45/06-07, ದಿ: 23.5.2006 | Not Visible | DUFBLM54844 |
| 3. | Hero Honda Splender KA-30-J-9055 | ಸಾಗರ ವಲಯ ಇವರ ಅಮೊ ಸಂ: 45/06-07, ದಿ: 18.7.2006 | OIL 18E 41133 | OIL20F41772 |
| 4. | Lorry KA-15-225 | ಸಾಗರ ವಲಯ ಇವರ ಮೊ ಸಂ: 53/06-07, ದಿ: 14.8.2006 | 25231A173702 | 369073522843 |
| 5. | Tempo Trax KA-27-M-671 | ಆನವಟ್ಟಿ ವಲಯ ಇವರ ಅಮೊ ಸಂ: 68/06-07, ದಿ: 8.8.2006 | Not Visible | Not Visible |
| 6. | Yamaha Bike KA-14-Q-9766 | ಸಾಗರ ವಲಯ ಇವರ ಅಮೊ ಸಂ: 54/06-07, ದಿ: 22.8.2006 | 5KA 146101 | 0265KA144101 |
| 7. | Maruthi Van KA-14-M-2362 | ಸ.ಅ.ಸಂ, ಅ.ಸಂ.ದಳ, ಶಿಕಾರಿಪುರ ಇವರ ಅಮೊ ಸಂ: 35/06-07 ದಿ: 31.8.2006 | E8BIN1423538 | ST91IN182994 |
| 8. | Maruthi Van KA-36-M-780 | ಸ.ಅ.ಸಂ, ಅ.ಸಂ.ದಳ, ಶಿಕಾರಿಪುರ ಇವರ ಅಮೊ ಸಂ: 34/06-07 ದಿ: 24.8.2006 | 730692 | 904307 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳ ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಜಿ. ಜಯರಾಮಯ್ಯ**

ಪಿ.ಆರ್. 1388

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು - 560 001**

### ಪ್ರಕಟಣೆ

**ಸಂಖ್ಯೆ: ಕರಾಆ:ಆಡಳಿತ:06:2006, ದಿನಾಂಕ: 6ನೇ ಸೆಪ್ಟೆಂಬರ್ 2006**

**ವಿಷಯ:** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಅಡಿಯಲ್ಲಿ ರಚಿತವಾಗಿರುವ ಜಿಲ್ಲಾ ವೇದಿಕೆಗಳ ಅಧ್ಯಕ್ಷರ ಸ್ಥಾನಕ್ಕೆ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(a) ರನ್ವಯ ಜಿಲ್ಲಾ ನ್ಯಾಯಾಧೀಶರಾಗಿರುವವರನ್ನು ಅಥವಾ ಜಿಲ್ಲಾ ನ್ಯಾಯಾಧೀಶರಾಗಲು ಅರ್ಹರಿರುವವರನ್ನು ಅಥವಾ ಜಿಲ್ಲಾ ನ್ಯಾಯಾಧೀಶರಾಗಿರುವಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಕೊಳ್ಳಲು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಲ್ಲಿ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಚಿಕ್ಕಮಗಳೂರು, ಹಾಸನ ಮತ್ತು ಧಾರವಾಡ ಜಿಲ್ಲಾ ವೇದಿಕೆಗಳಲ್ಲಿನ ಅಧ್ಯಕ್ಷರ ಸ್ಥಾನಕ್ಕೆ ಈ ಮುಂದಿನ ಅರ್ಹತೆ ಇರುವ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ **ದಿನಾಂಕ: 10.10.2006ರ ಸಂಜೆ 5.00 ಗಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001, ಇಲ್ಲಿಗೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.** ಅರ್ಜಿ ನಮೂನೆಯ ಪ್ರತಿಗಳನ್ನು ಎಲ್ಲಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಸಂಬಂಧಪಟ್ಟ ಅರ್ಜಿದಾರರು ನೇರವಾಗಿ ಅರ್ಜಿಯ ಜೆರಾಕ್ಸ್ ಪ್ರತಿಗಳನ್ನು ಪಡೆದುಕೊಂಡು (ಜೆರಾಕ್ಸ್ ಶುಲ್ಕವನ್ನು ಪಾವತಿ ಮಾಡಿ) ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ. ಅರ್ಜಿಯನ್ನು ಯಾವುದೇ ಕಾರಣಕ್ಕೆ ಅಂಚೆ ಮೂಲಕ ಕಳುಹಿಸುವ ಕ್ರಮವನ್ನು ವಹಿಸುವುದಿಲ್ಲ.

**ಅರ್ಹತೆಗಳು:**

1. ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ)ರನ್ವಯ ಜಿಲ್ಲಾ ನ್ಯಾಯಾಧೀಶರಾಗಿರುವವರು, ಜಿಲ್ಲಾ ನ್ಯಾಯಾಧೀಶರಾಗಿದ್ದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಾತಿ ಹೊಂದಲು ಅರ್ಹರಿರುವವರು ಜಿಲ್ಲಾ ವೇದಿಕೆಯ ಅಧ್ಯಕ್ಷರ ಸ್ಥಾನಕ್ಕೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.
2. ಜಿಲ್ಲಾ ನ್ಯಾಯಾಧೀಶರಾಗಿ ನೇಮಕ ಹೊಂದಲು ಅರ್ಹರೆಂದರೆ, ಅಂಗೀಕೃತ ವಿಶ್ವವಿದ್ಯಾಲಯದ ಕಾನೂನು ಪದವೀಧರರಾಗಿರುವುದರ ಜೊತೆಗೆ, ನ್ಯಾಯವಾದಿಗಳಾಗಿ ಕನಿಷ್ಠ ಏಳು ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ಕಾರ್ಯನಿರ್ವಹಿಸಿರಬೇಕು ಹಾಗೂ ಗ್ರಾಹಕ ಸಂರಕ್ಷಣಾ ಕಾಯ್ದೆ ಬಗ್ಗೆ ಸಂಪೂರ್ಣವಾಗಿ ತಿಳಿದವರಾಗಿರಬೇಕು.
3. ಅರ್ಜಿಯನ್ನು ಸಲ್ಲಿಸುವ ದಿನಾಂಕದೊಂದಿಗೆ 35 ವರ್ಷ ವಯಸ್ಸನ್ನು ಮೀರಿದವರಾಗಿರಬೇಕು ಹಾಗೂ 59 ವರ್ಷ ವಯಸ್ಸಿನೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸುವುದು.
4. ಅರ್ಜಿಯನ್ನು ಸಲ್ಲಿಸುವ ದಿನಾಂಕದೊಂದಿಗೆ ಕಾನೂನು ವಿಷಯದಲ್ಲಿ ಸಂಪೂರ್ಣ ಪರಿಣತಿಯನ್ನು ಹೊಂದಿರುವ ಜೊತೆಗೆ ಉತ್ತಮ ಗುಣ ಹಾಗೂ ನಡತೆ ಹೊಂದಿದವರಾಗಿರಬೇಕು.
5. ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಲು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲು ತೀರ್ಪುಗಳನ್ನು ಬರೆಯಲು ಸಾಮರ್ಥ್ಯವನ್ನು ಹೊಂದಿರಬೇಕಾಗಿರುತ್ತದೆ.
6. ಅರ್ಜಿದಾರರು ತಮ್ಮ ಜನ್ಮ ದಿನಾಂಕ, ವಿದ್ಯಾರ್ಹತೆ, ಅನುಭವ, ಗುಣ ಮತ್ತು ನಡತೆ ಇವುಗಳಿಗೆ ಸಂಬಂಧಿಸಿದಂತಹ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಂದಿಗೆ ಸಲ್ಲಿಸುವುದು.
7. ಅರ್ಜಿದಾರರು ಈಗಾಗಲೇ ಜಿಲ್ಲಾ ವೇದಿಕೆಯಲ್ಲಿ ಸದಸ್ಯರ ಸ್ಥಾನದಲ್ಲಿ ಕಾರ್ಯನಿರ್ವಹಿಸುತ್ತಿದ್ದರೆ ಅಂಥವರು ತಮ್ಮ ಅರ್ಜಿಗಳನ್ನು ಜಿಲ್ಲಾ ವೇದಿಕೆಯ ಅಧ್ಯಕ್ಷರ ಮೂಲಕ ರಾಜ್ಯ ಆಯೋಗಕ್ಕೆ ಸಲ್ಲಿಸಬೇಕಾಗುತ್ತದೆ.

ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದುವವರು ಜಿಲ್ಲಾ ನ್ಯಾಯಾಧೀಶರ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ನೇಮಕಾತಿಯು 5 ವರ್ಷಗಳ ಕಾಲಿಕ ಸೇವಾವಧಿಯಾಗಿರುತ್ತದೆ. ಜಿಲ್ಲಾ ವೇದಿಕೆಯ ಸದಸ್ಯರು ಅಧ್ಯಕ್ಷರ ಸ್ಥಾನಕ್ಕೆ ಆಯ್ಕೆ ಬಯಸಿ ಅರ್ಜಿಯನ್ನು ಜಿಲ್ಲಾ ವೇದಿಕೆ ಮೂಲಕ ಸಲ್ಲಿಸಿದಾಗ ಸಂಬಂಧಪಟ್ಟ ಜಿಲ್ಲಾ ವೇದಿಕೆಯ ಅಧ್ಯಕ್ಷರು ಸದರಿ ಸದಸ್ಯರು ತಮ್ಮ ಸದಸ್ಯತ್ವದ ಕಾಲಿಕ ಸೇವಾವಧಿಯಲ್ಲಿ ಜಿಲ್ಲಾ ವೇದಿಕೆಯ ಪ್ರಕರಣಗಳ ಇತ್ಯರ್ಥಕ್ಕೆ ಯಾವ ರೀತಿ ಸಹಕರಿಸಿರುತ್ತಾರೆ ಮತ್ತು ಪ್ರಕರಣಗಳ ತೀರ್ಪುಗಳನ್ನು ಬರೆಯುವ ಸಾಮರ್ಥವನ್ನು ಹೊಂದಿದ್ದಾರೆಯೇ ಹಾಗೂ ಎಷ್ಟು ಪ್ರಕರಣಗಳ ತೀರ್ಪುಗಳನ್ನು ಬರೆದಿರುತ್ತಾರೆ ಎಂಬ ಮಾಹಿತಿಯನ್ನು ಒಳಗೊಂಡ ದೃಢೀಕರಣ ಪತ್ರದೊಂದಿಗೆ ಅರ್ಜಿಯನ್ನು ರಾಜ್ಯ ಆಯೋಗಕ್ಕೆ ಕಳುಹಿಸಿಕೊಡಬೇಕಾಗಿರುತ್ತದೆ.

ಈ ಆಯ್ಕೆಯಲ್ಲಿ ಯಾವುದೇ ರೀತಿಯ ಶಿಫಾರಸ್ಸಿಗೆ ಅವಕಾಶವಿರುವುದಿಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**

ಪಿ.ಆರ್. 1391

ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ

**ಸಂಖ್ಯೆ: ಸಿಬ್ಬಂದಿ: ಶಿಸ್ತು:ಅಗೈಹಾ:23:2004-05, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2006**

**ವಿಷಯ:** ಶ್ರೀ ಎಂ.ಜಿ. ಬಸವರಾಜು ಎ.ದ. ಭೂಮಾಪಕರು ಇವರ ಅನಧೀಕೃತ ಗೈರು ಹಾಜರಿ ಮತ್ತು ಕರ್ತವ್ಯ ಲೋಪದ ಬಗ್ಗೆ.

**ಉಲ್ಲೇಖ:**

1 ಭೂ.ಜಂ.ನಿ. ಮೈಸೂರು ವಿಭಾಗ ಮೈಸೂರು ಇವರ ಪತ್ರ ಸಂ:ಸಿಬ್ಬಂದಿ: ಶಿಸ್ತು:ಅನಗೈ:37:2004-05 ದಿನಾಂಕ:3:15.3.2005

2 ಭೂ.ಉ.ನಿ.ಮಂಡ್ಯ ವಿಭಾಗ ಮಂಡ್ಯ ಇವರ ಕಾರಣ ಕೇಟಿ ನೋಟೀಸು (ಆರೋಪ ಪಟ್ಟಿಯೊಂದಿಗೆ) ಸಂ;ಸಿಬ್ಬಂದಿ:ಶಿಸ್ತು:36:2002-03, ದಿನಾಂಕ :19:21.3.2003.

3 ಕಾರಣ ಕೇಳಿ ನೋಟಿಸಿಗೆ ನೌಕರರು ನೀಡಿದ ರಕ್ಷಣಾ ಹೇಳಿಕೆ ದಿನಾಂಕ:31.3.2003.

4 ಭೂ.ಉ.ನಿ.ಮಂಡ್ಯ ವಿಭಾಗ, ಮಂಡ್ಯ ಇವರ ವಿಚಾರಣಾ ವರದಿ.

5 ಈ ಕಛೇರಿಯ ಎರಡನೇ ಕಾರಣ ಕೇಳಿ ನೋಟೀಸು ಸಂ:ಸಿಬ್ಬಂದಿ:ಶಿಸ್ತು: ಅಗೈಹಾ:23:2004-05, ದಿ:14.12.2005.

**ಪ್ರಸ್ತಾವನೆ:**

ಶ್ರೀ ಎಂ.ಜಿ. ಬಸವರಾಜು, ಎರಡನೇ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಮಳವಳ್ಳಿ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ ವ್ಯಾಪ್ತಿಯ ಮಳವಳ್ಳಿ ತಾಲ್ಲೂಕು ಭೂಮಾಪನ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ನೌಕರರು ಕಛೇರಿ ಕರ್ತವ್ಯಕ್ಕೆ ದಿನಾಂಕ:7.1.2002ರಿಂದ 31.1.2002 ರವರೆಗೂ ಹಾಗೂ ದಿನಾಂಕ:5.2.2002 ರಿಂದ 17.5.04 ರವರೆಗೆ ಅನಧಿಕೃತ ಗೈರು ಹಾಜರಾಗಿ ಕಛೇರಿಯ 92 ಕಡತಗಳನ್ನು ಅವರಲ್ಲಿಯೇ ಬಾಕಿ ಉಳಿಸಿಕೊಂಡಿದ್ದರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮಂಡ್ಯ ರವರು ದಿನಾಂಕ:12.12.2002ರ ಪತ್ರದಲ್ಲಿ ಭೂದಾಖಲೆಗಳ ಉಪನಿರ್ದೇಶಕರು, ಮಂಡ್ಯ ರವರನ್ನು ಕೋರಿದ್ದು, ಭೂದಾಖಲೆಗಳ ಉಪನಿರ್ದೇಶಕರು, ಮಂಡ್ಯ ವಿಭಾಗ, ಮಂಡ್ಯ ಇವರು ಶಿಸ್ತು ಪ್ರಕರಣವನ್ನು ನಡೆಸಿ ಪ್ರಕರಣವನ್ನು ಮುಂದಿನ ಕ್ರಮಕ್ಕಾಗಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರಿಗೆ ಸಲ್ಲಿಸಿರುತ್ತಾರೆ. ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರು ಪ್ರಕರಣವನ್ನು ಪರಿಶೀಲಿಸಿ, ನೌಕರರು ಕಠಿಣ ದಂಡನೆಗೆ ಅರ್ಹರಾಗಿ ರುತ್ತಾರೆಂದು ಅಭಿಪ್ರಾಯಪಟ್ಟು, ಕಠಿಣ ದಂಡನೆಯನ್ನು ವಿಧಿಸುವ ಅಧಿಕಾರ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 9(3) ರಡಿಯಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರು ನೇಮಕ ಪ್ರಾಧಿಕಾರಿಯಲ್ಲದ ಕಾರಣ, ಅವರ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ನಿಯಮ 11,22(ಎ) ಮೇರೆಗೆ ಪ್ರಕರಣದ ಮೂಲ ಕಡತ, ಹಾಗೂ ವಿಚಾರಣಾ ದಾಖಲೆಗಳನ್ನು ಸಕ್ಷಮ ಪ್ರಾಧಿಕಾರಿಯಾದ ಈ ಕಛೇರಿಗೆ ಮುಂದಿನ ಪ್ರಕ್ರಿಯೆಗಾಗಿ ಉಲ್ಲೇಖ (1)ರ ಪತ್ರದೊಂದಿಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರು ಸಲ್ಲಿಸಿರುತ್ತಾರೆ.

ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರು ಸಲ್ಲಿಸಿರುವ ಮೂಲ ಕಡತ ಹಾಗೂ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಿದಾಗ, ಭೂದಾಖಲೆಗಳ ಉಪ ನಿರ್ದೇಶಕರು, ಮಂಡ್ಯರವರು ಶಿಸ್ತು ಕ್ರಮ ಪ್ರಾರಂಭಿಸಿರುವ ಪ್ರಕರಣ ಸಂ.ಸಿಬ್ಬಂದಿ.ಶಿಸ್ತು. 36:2002-03ರಲ್ಲಿ ಶ್ರೀ ಎಂ.ಜಿ. ಬಸವರಾಜು ಇವರ ವಿರುದ್ಧ ದೋಷಾರೋಪಣೆಯನ್ನು ದಿನಾಂಕ:19:21.3.2003 ರಂದು ಜಾರಿ ಮಾಡಿರುತ್ತಾರೆ. ನೌಕರರ ವಿರುದ್ಧ ಮಾಡಲಾದ ದೋಷಾರೋಪಣೆಯನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ, (ಇನ್ನು ಮುಂದೆ ಈ ನಡವಳಿಯಲ್ಲಿ ನೌಕರರನ್ನು ಆರೋಪಿತ ನೌಕರರೆಂದು ಕರೆಯಲಾಗಿದೆ).

**ಆರೋಪ-1**

ಮಂಡ್ಯ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯ ವ್ಯಾಪ್ತಿಯ ಮಳವಳ್ಳಿ ತಾಲ್ಲೂಕು ಭೂಮಾಪನ ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಎಂ.ಬಿ. ಬಸವರಾಜು ಆದ ನೀವು ದಿನಾಂಕ:7.1.2002ರಿಂದ 31.1.2002 ರವರೆಗೂ ನಂತರ ದಿನಾಂಕ:5.2.2002ರಿಂದ ಇದುವರೆಗೂ ಕಛೇರಿ ಕಾರ್ಯಕ್ಕೆ ಸತತವಾಗಿ ಗೈರುಹಾಜರಾಗಿರುತ್ತೀರಿ.ಈ ನಿಮ್ಮ ಗೈರು ಹಾಜರಿಗೆ ಸಕ್ಷಮ ಪ್ರಾಧಿಕಾರಿ ಯವರಿಂದ ರಜೆ ಮಂಜೂರಾತಿಯನ್ನಾಗಲೀ ಪೂರ್ವಾನುಮತಿಯನ್ನಾಗಲೀ ಪಡೆದಿರುವುದಿಲ್ಲ. ಸರ್ಕಾರಿ ನೌಕರರಾದ ನೀವು ಈ ರೀತಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1958ರ ನಿಯಮ: 106ಎ ಮತ್ತು 162 ರ ಪ್ರಕಾರ ದುರ್ನಡತೆಯ ಅಪರಾಧವಾಗುವುದು, ಅಲ್ಲದೆ ಈ ನಿಮ್ಮ ಗೈರು ಹಾಜರಿಯು 4 ತಿಂಗಳು ಮೀರಿರುವುದರಿಂದ ಇದೇ ನಿಯಮಾವಳಿಯ ನಿಯಮ 108ನ್ನು ಆಕರ್ಷಿಸಿ ಶಿಸ್ತು ಕ್ರಮಕ್ಕೆ ಗುರಿಯಾಗಿರುತ್ತೀರಿ.

**ಆರೋಪ-2**

ಅಲ್ಲದೆ ನೀವು ಸಾರ್ವಜನಿಕರಿಗೆ ಸಂಬಂಧಿಸಿದ ಕಛೇರಿಯ 92 ಕಡತಗಳನ್ನು ನಿಮ್ಮಲ್ಲಿಯೇ ಬಾಕಿ ಉಳಿಸಿಕೊಂಡಿದ್ದು ಇವುಗಳಲ್ಲಿ 34 ಕಡತಗಳನ್ನು ಮಾತ್ರ ದಿನಚರಿಗೆ ಹಚ್ಚಿರುತ್ತೀರಿ. ಆದರೆ ಇವುಗಳಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ನಿಯಮಾವಳಿಗಳನ್ವಯ ನೀವು ನಿರ್ವಹಿಸಬೇಕಾದ ಕೆಲಸವನ್ನು ನಿರ್ವಹಿಸಿರುವುದಿಲ್ಲ. ಅಲ್ಲದೆ ಗೈರು ಹಾಜರಾದ ಕೂಡಲೇ ಸದರಿ ಕಡತಗಳನ್ನು ಕಛೇರಿಗೆ ಹಿಂದಿರುಗಿಸದೆ ಈ ಬಗ್ಗೆ ಜ್ಞಾಪನಗಳನ್ನು ನೀಡಿದ್ದರೂ ಸಹ ಗಮನಿಸದೇ ಅನಾವಶ್ಯಕವಾಗಿ ವೃತ್ತ ಆರಕ್ಷಕ ನಿರೀಕ್ಷಕರು, ಮಳವಳ್ಳಿ ಇವರಿಗೆ ಪತ್ರ ಬರೆದು ಕಡತಗಳನ್ನು ಒಪ್ಪಿಸಲು ನಿಮಗೆ ಈ ರೀತಿ ಒತ್ತಡ ಹೇರಬೇಕಾದ ಅನಿವಾರ್ಯತೆ ಉಂಟು ಮಾಡಿರುವುದೇ ಅಲ್ಲದೆ, ಪಡೆದ ಕಡತಗಳಲ್ಲಿ ನಿಯಮಬದ್ಧವಾಗಿ ಕೆಲಸ ನಿರ್ವಹಿಸದೆ ಇರುವ ಮೂಲಕ ಸಾರ್ವಜನಿಕರಿಗೆ ತೊಂದರೆ ಉಂಟು ಮಾಡಿ ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಕರ್ತವ್ಯಚ್ಯುತಿ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ ನಿಯಮ) 966ರ ನಿಯಮ 1 ಮತ್ತು 2,3 ಹಾಗೂ 4 ಇವುಗಳನ್ನು ಉಲ್ಲಂಘಿಸಿರುತ್ತೀರಿ.

ಈ ರೀತಿ ನಿಮ್ಮ ಗೈರು ಹಾಜರಿ ಮತ್ತು ಬೇಜವಾಬ್ದಾರಿ ವರ್ತನೆಯಿಂದ ಸರ್ಕಾರದ ಮತ್ತು ಸಾರ್ವಜನಿಕರ ಕೆಲಸಗಳಿಗೆ ತೊಂದರೆಯಾಗಿದ್ದು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ಅಡಿಯಲ್ಲಿ ಶಿಸ್ತು ಕ್ರಮ ಜರುಗಿಸಲು ನೀವೇ ಅವಕಾಶ ಮಾಡಿರುತ್ತೀರಿ.

ದೋಷಾರೋಪಣೆ ಪಟ್ಟಿಯನ್ನು ಆಪಾದಿತ ನೌಕರರು ಸ್ವೀಕರಿಸಿ ದಿನಾಂಕ:31.3.2003ರಂದು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸುತ್ತಾ, ಅನಾರೋಗ್ಯದಿಂದ ಇದ್ದು ಕರ್ತವ್ಯ ನಿರ್ವಹಿಸಲು ಸಾಧ್ಯವಾಗದ ಕಾರಣ ಮಾನವೀಯ ದೃಷ್ಟಿಯಿಂದ ಸರ್ಕಾರಿ ಸೇವೆಯಿಂದ ನಿವೃತ್ತಿ ಮಾಡಿಸಿ ಕೊಡಲು ಕೋರಿರುತ್ತಾರೆ.

ಈ ಬಗ್ಗೆ ವಿಚಾರಣೆ ನಡೆಸಿದ ಭೂದಾಖಲೆಗಳ ಉಪ ನಿರ್ದೇಶಕರು, ಮಂಡ್ಯರವರು ತಮ್ಮ ವಿಚಾರಣಾ ವರದಿಯಲ್ಲಿ ಆಪಾದಿತರ ಮೇಲೆ ಮಾಡಲಾಗಿರುದ ಆರೋಪಗಳು ಸಾಬೀತಾಗಿವೆ ಹಾಗೂ ಇವು ಕಠಿಣ ದಂಡನೆಯನ್ನು ಆಕರ್ಷಿಸುವ ಆರೋಪಗಳಾಗಿರುತ್ತವೆ ಎಂದು ಅಭಿಪ್ರಾಯಪಟ್ಟು ಮುಂದಿನ ಕ್ರಮಕ್ಕಾಗಿ ಭೂದಾಖಲೆಗಳ ಜಂಟಿ ನಿರ್ದೇಶಕರು ಮೈಸೂರು ಇವರಿಗೆ ಕಡತವನ್ನು ವಿಚಾರಣಾ ದಾಖಲಾತಿಗಳೊಂದಿಗೆ ಸಲ್ಲಿಸಿರುತ್ತಾರೆ.

ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರು ಪ್ರಕರಣವನ್ನು ಪರಿಶೀಲಿಸಿ, ಆಪಾದಿತ ನೌಕರರ ಮೇಲೆ ಮಾಡಲಾಗಿರುವ ಆರೋಪಗಳು ಕಠಿಣ ದಂಡನೆಯನ್ನು ವಿಧಿಸುವ ಆರೋಪಗಳಾಗಿರುತ್ತವೆ ಎಂದು ಅಭಿಪ್ರಾಯಪಟ್ಟು ನಿಯಮ 9(3) ರಂತೆ ನೇಮಕಾತಿ ಪ್ರಾಧಿಕಾರವಲ್ಲದೆ ಬೇರೆ ಪ್ರಾಧಿಕಾರವು ಕಠಿಣ ದಂಡನೆ ಅಂದರೆ ನಿಯಮ 8(vi) ರಿಂದ 8 (viii) ರವರೆಗಿನ ಯಾವುದಾದರೂ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರದ ಕಾರಣ, ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರುರವರು ಕಡತವನ್ನು ಮುಂದಿನ ಕ್ರಮಕ್ಕಾಗಿ ನೇಮಕಾತಿ ಪ್ರಾಧಿಕಾರವಾದ ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಈ ಬಗ್ಗೆ ಈ ಕಛೇರಿಯಿಂದ ವಿಚಾರಣಾ ಪ್ರತಿಯೊಂದಿಗೆ ಎರಡನೇ ಕಾರಣ ಕೇಳಿ ನೋಟೀಸನ್ನು ನೌಕರರಿಗೆ ದಿನಾಂಕ:14.12.2005 ರಂದು ಜಾರಿ ಮಾಡಿದ್ದು, ಅದನ್ನು ಆರೋಪಿತ ನೌಕರರು ದಿನಾಂಕ:2.1.2006ರಂದು ಸ್ವೀಕರಿಸಿ, ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಕಾಲಾವಕಾಶವನ್ನು ಕೋರಿದ ಮೇರೆಗೆ 10 ದಿನಗಳ ಹೆಚ್ಚುವರಿ ಕಾಲಾವಕಾಶವನ್ನು ನೀಡಿದರೂ ಆರೋಪಿತ ನೌಕರರು ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ ಈ ಎಲ್ಲಾ ಅಂಶಗಳನ್ನು ಹಾಗೂ ವಿಚಾರಣಾ ವರದಿ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಡಿಯಲ್ಲಿ ಶ್ರೀ ಎಂ.ಬಿ. ಬಸವರಾಜು ಎರಡನೇ ದರ್ಜೆ ಭೂಮಾಪಕರವರು ಈ ಹಿಂದೆ ತಾಲ್ಲೂಕ ಭೂಮಾಪನ ಕಛೇರಿ, ಮಳವಳ್ಳಿಯಲ್ಲಿ ಕರ್ತವ್ಯದಲ್ಲಿದ್ದಾಗ ಎಸಗಿದ ಕರ್ತವ್ಯಲೋಪ ಹಾಗೂ ಅನಧಿಕೃತ ಗೈರು ಹಾಜರಿ ವಿರುದ್ಧ ಶಿಸ್ತು ಕ್ರಮ ಜರುಗಿಸಿ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿ ಮತ್ತು ದಾಖಲಾತಿಗಳನ್ನು ಪರಿಶೀಲಿಸಿರುತ್ತೇನೆ. ಆರೋಪಿತ ನೌಕರರು ಅವರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಆಸಕ್ತಿ ತೋರದೆ ಕೇಂದ್ರ ಕಛೇರಿಯ ಸುತ್ತೋಲೆ ಸಂ. ತಾಂ:ಅ:38:95-96, ದಿನಾಂಕ:21.12.95 ನ್ನು ಉಲ್ಲಂಘಿಸಿರುವುದು ಮತ್ತು ಸರ್ಕಾರಿ ಕೆಲಸಕ್ಕೆ ದಿನಾಂಕ:7.1.2002 ರಿಂದ 31.1.2002 ಸೇವಾ ಹಾಗೂ 5.2.2002ರಿಂದ 17.5.2004 ರವರೆಗೂ ಅನಧಿಕೃತ ಗೈರು ಹಾಜರು ಆಗಿ ಕರ್ನಾಟಕ ಸರ್ಕಾರಿ ನಿಯಮ 1958ರ ನಿಯಮ 106(ಎ) ಮತ್ತು 108 ನ್ನು ಉಲ್ಲಂಘಿಸಿರುವುದು ಹಾಗೂ ಸರ್ಕಾರಿ ಕೆಲಸದಲ್ಲಿ ಆಸಕ್ತಿ ಇಲ್ಲದೇ ಇರುವುದು ಕಂಡು ಬರುತ್ತದೆ. ಆಪಾದಿತ ನೌಕರರಿಗೆ ವಿಚಾರಣಾ ವರದಿಯಲ್ಲಿನ ಅಂಶಗಳ ಬಗ್ಗೆ ರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಿದ್ದಾಗ್ಯೂ ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆ ಕಾರಣ ಪ್ರಕರಣದ ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಆರೋಪಿತ ನೌಕರರ ವಿರುದ್ಧ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii) ರಲ್ಲಿನ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಅಭಿಪ್ರಾಯಪಡುತ್ತೇನೆ. ಅದರಂತೆ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 9(3) ಮತ್ತು 8(viii) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ:ಬಾಬುರಾವ್

ಮುಡಬಿ, ಬಾ.ಆ.ಸೇ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಶ್ರೀ ಎಂ.ಜಿ. ಬಸವರಾಜು, ಎರಡನೇ ದರ್ಜೆ ಭೂ-ಮಾಪಕರು, ತಹಶೀಲ್ದಾರ್ ಕಛೇರಿ, ಮಳವಳ್ಳಿ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

ಆಯುಕ್ತರು
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು,
ಬೆಂಗಳೂರು.

ಪಿ.ಆರ್. 1277

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂ.ಸಕಾಅದಾ:ಕಾನಪ:ಡಿವಿಜಿ:ಸಿಆರ್-72, ದಿನಾಂಕ: 31ನೇ ಆಗಸ್ಟ್ 2006**

**ಅರ್ಜಿದಾರರು:**
ಶ್ರೀಮತಿ ಸಿ.ಪಿ. ಮಂಜುಳಾ ಕೋಂ ಲೇ ಎ.ವಿ. ರಾಮದಾಸಪ್ಪ, ಕುಂಬಾರ ಓಣಿ, ಸುವರ್ಣ ನಿಲಯ, ಹರಿಹರ

**ವಿರುದ್ಧ**

**ಪ್ರತಿವಾದಿಗಳು:**
1. ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ರವರ ಕಛೇರಿ, ವಾ.ಕಾ ಮತ್ತು ಪಾ.ವಿಭಾಗ, ಬೆಂ.ವಿ.ಸ.ಕಂ. ಹರಿಹರ.

**ಪ್ರಕಟಣೆ**

ಶ್ರೀ:ಶ್ರೀಮತಿ ಸಿ.ಪಿ. ಮಂಜುಳಾ ಕೋಂ ಎ.ವಿ. ರಾಮದಾಸಪ್ಪ, (2) ಕು॥ ಭಾವನ ಬಿನ್ ಎ.ವಿ. ರಾಮದಾಸಪ್ಪ, (3) ವೆಂಕಟಪ್ಪ S/o ಮುನಿದಾಸಯ್ಯ, (4) ಲಕ್ಷ್ಮಮ್ಮ ಕೋಂ ಮುನಿದಾಸಯ್ಯ ಇವರ ಮತ್ತು ಹೆಂಡತಿ ಮಗಳು, ತಂದೆ ತಾಯಿ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎ.ವಿ. ರಾಮದಾಸಪ್ಪ S/o ವೆಂಕಟಪ್ಪ ರವರು ಒಂದನೇ ಪ್ರತಿವಾದಿಗಳಾದ ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಛೇರಿ ಇವರ ಬೆಸ್ಕಾಂ ರಲ್ಲಿ ಸಹಾಯಕ ಲೈನ್‌ಮ್ಯಾನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ.ಗೌಡ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1322

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂ.ಸಕಾಅದಾ:ಕಾನಪ:ಡಿವಿಜಿ:ಸಿಆರ್-79, ದಿನಾಂಕ: 21ನೇ ಆಗಸ್ಟ್ 2006**

**ಅರ್ಜಿದಾರರು:**
ನಾಗಮಣಿ .ಎನ್ ಕೋಂ ಲೇ॥ ಎಸ್.ಹೆಚ್. ರಂಗಯ್ಯ
**ವಾಸ:** ಶ್ರೀ ಮೈಲಾರ ಲಿಂಗೇಶ್ವರ ದೇವಸ್ಥಾನದ ಹತ್ತಿರ ಮಿರ್ಜಾ ಬಡಾವಣೆ, ಹಿರಿಯೂರು.

**ವಿರುದ್ಧ**

**ಪ್ರತಿವಾದಿಗಳು:**
1. ಬೆಸ್ಕಾಂ ಎಕ್ಸಿಕ್ಯೂಟೀವ್ ಇಂಜಿನಿಯರ್, ಡಿ.ಸಿ. ಆಫೀಸ್ ಹತ್ತಿರ, ಚಿತ್ರದುರ್ಗ.
2. ಬೆಸ್ಕಾಂ ಸೆಕ್ಷನ್ ಆಫೀಸರ್ ಐಮಂಗಲ, ಹಿರಿಯೂರು "ತಾ" ಚಿತ್ರದುರ್ಗ ಜಿಲ್ಲೆ.

**ಪ್ರಕಟಣೆ**

ಶ್ರೀ:ಶ್ರೀಮತಿ ನಾಗಮಣಿ .ಎನ್ ಇವರು ಮೃತ ಎಸ್.ಹೆಚ್. ರಂಗಯ್ಯ ಇವರ ಹೆಂಡತಿ ಮತ್ತು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎಸ್.ಹೆಚ್. ರಂಗಯ್ಯ ರವರು ಒಂದನೇ ಪ್ರತಿವಾದಿಗಳಾದ ಎಕ್ಸಿಕ್ಯೂಟೀವ್ ಇಂಜಿನಿಯರ್ ಬೆಸ್ಕಾಂ ಇವರ ಬೆಸ್ಕಾಂ ರಲ್ಲಿ ಲೈನ್‌ಮ್ಯಾನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ.ಗೌಡ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1323

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು, ಇರಬಹಳಿ ಗ್ರಾಮದ ಸರ್ವೆ ನಂ.73 ರಲ್ಲಿ 6.00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಮೆ: ಸುದರ್ಶನ್ ಸ್ಟೋನ್ ಎಂಟರ್ ಪ್ರೈಸಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 403ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ:ಸಿ.ಐ. 92 ಎಂ.ಎಂ.ಎನ್. 2006 ದಿನಾಂಕ 19.07.2006.

